ಕರ್ನಾಟಕ
ಸ್ಕೌಟ್ ಮತ್ತು ಗೈಡ್
ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine

Vol-15 Issue No. 11 November - 2018 ₹ 10/-



Sri Vajubai Vala, Hon'ble Governor of Karnataka and Patron, BS&G, Karnataka Inagurated the "National Level Rover-Ranger Moot" in the Benign Presence of Sri Sri Madusudhana Guruji of Sri Satya Sai Loka Seva Institutions, Dr. Sudhakar, Hon'ble M.L.A. Sri B.N. Narasimha Murthy, Chancellor of Sri Satya Sai University for Human Excellance, Sri B. Narayan Rao, Secretary Sri Satya Sai Loka Seva Trust, Sri P.G.R. Sindhia, SCC, Sri M.A. Khalid, SC(S), Smt. P. Saroja, DCC of Bangalore North were Present.



Sri H.D. Devegowda, Hon'ble Former Prime Minister of India and Member of Parliament released the "Foundation Day Stamps" at his residence and Blessed the Movement. Sri PGR Sindhia, SCC, Sri M.A. Khalid, SC(S), Sri Mohan Kumar Kondajji, MLC & Hq. Commissioner, Smt. Sulthan Begum, Dy. Commissionar Commercial Taxes(Retd.), Guiders, Scouts & Guides of Bengaluru South District were present.

## Eminent Leaders and Senior Bureaucrats of Karnataka State released the "Foundation Day Stamps" on 7th November 2018 at Bengaluru

**Sri P.G.R. Sindhia, State Chief Commissioner, Sri M.A.Khalid, State Commissioner (Scouts) Sri Kondajji B. Shanmukhappa, Vice-President, Sri Mohan Kumar Kondajji MLC & Headquarters Commissioner, Smt. B.V. Ramalatha, JSS(G) Sri M.A.Chellaiah, Nodal Officer BBMP District and Guiders Scouts and Guides called on Eminent and Distinguished Personalities and Senior Government Officers who released the Foundation Day Stamps**



Jnanapeeta Awardee Dr. Chandrashekara Kambara was honoured with Scout Scarf by State Chief Commissioner Sri P.G.R. Sindhia in the Presence of Sri H.D. Deve Gowda, Former P.M.



Sri Siddaramaiah, Hon'ble Former Chief Minister of Karnataka released the Stamps at his residence. Dr.G.Parameshwar, Hon'ble Deputy Chief Minister of Karnataka, Sri B. Z. Zameer Ahmed Khan, Hon'ble Minister for Food & Civil Supplies, Minorities & Wakf Departments were Present



Sri Ramesh Kumar, Hon'ble Speaker of Karnataka Legislative Assembly released the Stamps at his Office at Vidhana Soudha.



Sri T.M.Vijaya Bhaskar, I.A.S., Chief Secretary to Government of Karnataka released the Stamps at his Office.

## Eminent Leaders and Senior Bureaucrats of Karnataka State released the "Foundation Day Stamps" on 7th November 2018 at Bengaluru.



Rev.Fr.Dr. Peter Machado, Archbishop of Bengaluru released the Stamps at "Bishop's House" at Bengaluru.



Sri S.Sureshkumar, Former Minister & Hon'ble Member of Karnataka Legislative Assembly released the Stamps at State Headquarters.



Hon'ble Minister Sri B.Z. Zameer Ahmed Khan is contributing to the "Flag Day Funds" of the Organisation.



Sri R.Shankar, Hon'ble Minister for Forests, Environment & Ecology Department contributed to the "Flag Day Funds" of the organization. Former Minister Sri H.Anjaneya & K.R.Puram MLA Sri Bairathi Basavaraj were present.



Hon'ble Former Minister Sri H. Anjaneya is contributing to the "Flag Day Funds" of the Organisation.



Sri R.Druvanarayana, Hon'ble Member of Parliament, Chamarajanagara was honoured by Scouts & Guides with "Scout Scarf" at Vidhana Soudha.

## Eminent Leaders and Senior Bureaucrats of Karnataka State released the "Foundation Day Stamps" on 7th November 2018 at Bengaluru.





Sri I.N.S. Prasad, Additional Chief Secretary, Department of Finance, Sri Anil Kumar Jha, I.A.S., Secretary to Govt. Department of Finance (Budget & Resource) Sri Pavan Kumar Malapati, I.A.S., Deputy Secretary (Budget & Resources) Fnance Department released the "Foundation Day Stamps" at Vidhana Soudha.



Sri Srinivas, I.A.S., Commissioner for Youth Empowerment & Sports Department, Government of Karnataka released the "Foundation Day Stamps" at his Office. Senior officers of the Department were present.



Dr. N. Manjula, I.A.S., Commissioner of Collegiate Education released the "Foundation Day Stamps"



Dr. H.U. Talawar, Director, Department of Technical Education, Released the "Foundation Day Stamps"



Prof. S. Malleswarappa, Director Department of Collegiate Education released the "Foundation Day Stamps"



"Foundation Day Stamps" were released at Shanthigruha, State Headquarters



# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# KARNATAKA Scout & Guide

MONTHLY NEWS MAGAZINE



## ಪರಿವಿಡಿ




ಸಂಚಿಕೆಯ ವಾರ್ಷಿಕ ಚಂದಾ ರೂ. 100/-

ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39
ಅರಮನೆ ರಸ್ತೆ, ಬೆಂಗಳೂರು-560 001
ಇಲ್ಲಿಗೆ ಕಳುಹಿಸಲು ಕೋರಿದೆ.



ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka





# ರಾಜ್ಯ ಮುಖ್ಯ ಆಯುಕ್ತರ ನುಡಿ

ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೆ,

ನವೆಂಬರ್ 01 ರಿಂದ 04ರ ವರೆಗೆ ರಾಷ್ಟ್ರಮಟ್ಟದ "ರೋವರ್– ರೇಂಜರ್ ಮೂಟ್" ಚಿಕ್ಕಬಳ್ಳಾಪುರ ಜಿಲ್ಲೆಯ ಮುದ್ದೇನಹಳ್ಳಿಯಲ್ಲಿರುವ "ಶ್ರೀ ಸತ್ಯ ಸಾಯಿ ಗ್ರಾಮ"ದಲ್ಲಿ ನಡೆಯಿತು. 27 ರಾಜ್ಯಗಳಿಂದ 1500 ಪ್ರತಿನಿಧಿಗಳು ಭಾಗವಹಿಸಿದ್ದರು. ಯುವಕರ ಸರ್ವತೋಮುಖ ವ್ಯಕ್ತಿತ್ವ ವಿಕಸನಕ್ಕೆ ಅನುಕೂಲವಾಗುವಂತಹ ಕಾರ್ಯಕ್ರಮಗಳನ್ನು ಮೂಟ್‌ನಲ್ಲಿ ಹಮ್ಮಿಕೊಳ್ಳಲಾಗಿತ್ತು. ನಮ್ಮ ಚಟುವಟಿಕೆಗಳನ್ನು ಯಾವಾಗಲೂ ಉತ್ತೇಜಿಸುವ ಕರ್ನಾಟಕದ ಘನವೆತ್ತ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ವಾಜುಬಾಯಿ ವಾಲಾ ಅವರು ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸಿ ಎಲ್ಲರನ್ನೂ ಉತ್ತೇಜಿಸಿ ಮಾತನಾಡಿದರು. ಚರ್ಚಾಸ್ಪರ್ಧೆ, ಆಶುಭಾಷಣ, ರಸಪ್ರಶ್ನೆ, ಸಮೂಹ ಚರ್ಚೆ ಮೊದಲಾದ ಕಾರ್ಯಕ್ರಮಗಳ ಜೊತೆಗೆ ಆಟಗಳು, ಸಾಹಸಕ್ರೀಡೆಗಳು, ವ್ಯಾಗ್ಸ್ ಮತ್ತು ವೋಸಂ ಉಪಕ್ರಮಗಳು, ಸೇವಾ ಕಾರ್ಯವನ್ನು ಉತ್ತೇಜಿಸುವ ಜಾನಪದ ಹಬ್ಬ, ಭವ್ಯ ಶಿಬಿರಾಗ್ನಿ ಕಾರ್ಯಕ್ರಮಗಳನ್ನು ಏರ್ಪಡಿಸಿದ್ದೆವು. ಶಿಬಿರಾರ್ಥಿಗಳೊಡನೆ ಶ್ರೀ ಎಲ್.ನರಸಿಂಹಯ್ಯ, ಡಾ॥ ಗುರುರಾಜ ಕರ್ಜಗಿ ಮೊದಲಾದ ಮುತ್ಸದಿಗಳು ಸಂವಹನ ನಡೆಸಿದರು. ಶ್ರೀ ಸತ್ಯ ಸಾಯಿ ಸಂಸ್ಥೆಯವರು ನಮ್ಮ ಕಾರ್ಯಕ್ರಮಕ್ಕೆ ಎಲ್ಲಾ ರೀತಿಯ ಸಹಕಾರವನ್ನು ನೀಡಿದರು. ಸಂಸ್ಥೆಗೆ ಸಂಬಂಧಿಸಿದ ಪದಾಧಿಕಾರಿಗಳಿಗೆ ನಾನು ಕೃತಜ್ಞನಾಗಿದ್ದೇನೆ. ಅಂತೆಯೇ ಕಾರ್ಯಕ್ರಮವನ್ನು ಯಶಸ್ವಿಗೊಳಿಸಲು ಶ್ರಮವಹಿಸಿದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳಿಗೂ ಹೃದಯಪೂರ್ವಕ ಅಭಿನಂದನೆಗಳು.

ನಾವು ಈ ಬಾರಿ ಕನ್ನಡ ರಾಜ್ಯೋತ್ಸವವನ್ನು ವಿಶಿಷ್ಟವಾಗಿ ರೋವರ್ಸ್ ರೇಂಜರ್ಸ್ ಮೂಟ್‌ನಲ್ಲಿ ಆಚರಿಸಿದೆವು. ವಿಶ್ವದ ಅತ್ಯಂತ ಹಳೆಯ ಭಾಷೆಗಳಲ್ಲಿ ಒಂದಾದ ಕನ್ನಡಕ್ಕೆ ಎರಡುಸಾವಿರ ವರ್ಷಗಳಿಗಿಂತಲೂ ಹೆಚ್ಚಿನ ಇತಿಹಾಸವಿದೆ. ಪೂರ್ವಗನ್ನಡದಿಂದ ಹಿಡಿದು ಈಗಿನ ಆಧುನಿಕ ಕನ್ನಡದವರೆಗೆ ಬೆಳೆದಿರುವ ಭಾಷೆಯು ಅತ್ಯಂತ ಸಂಮೃದ್ಧವಾಗಿದೆ. ಭಾಷೆ ಎಂದರೆ ಬರಿಯ ಮಾತಲ್ಲ. ಅದು ಒಂದು ಸಂಸ್ಕೃತಿಯನ್ನು, ಜನಜೀವನವನ್ನು, ಕಾಲವನ್ನು ಸೂಚಿಸುತ್ತದೆ. ಭಾಷೆಯು ಅಭಿವ್ಯಕ್ತಿಯ ಮಾಧ್ಯಮ ಮತ್ತು ವ್ಯಕ್ತಿತ್ವದ ಅಂಗ. ಜ್ಞಾನವು ವಿಶೇಷವಾಗಿ ವಿಜ್ಞಾನ ಮತ್ತು ತಂತ್ರಜ್ಞಾನ ಅತ್ಯಂತ ವೇಗದಲ್ಲಿ 20–21 ನೇಯ ಶತಮಾನದಲ್ಲಿ ಆಗುತ್ತಿದೆ. ನೂರಾರು ವರ್ಷಗಳಲ್ಲಿ ಕಂಡು ಬರದಿರುವ ಬೆಳವಣಿಗೆಗಳು 10–15 ವರ್ಷದಲ್ಲಿ ಆಗುತ್ತಿದೆ. ಆಧುನಿಕ ಜ್ಞಾನದ ಪರಿಧಿಯನ್ನು ಇಂಗ್ಲೀಷ್, ಜರ್ಮನಿ, ಜಪಾನಿ, ಚೈನೀಸ್ ಮುಂತಾದ ಭಾಷೆಗಳು ವಿಸ್ತರಿಸುತ್ತಿದೆ. ಈ ಅರಿವು ನಮ್ಮ




ಮಕ್ಕಳಿಗೂ ಸಿಗಬೇಕು ಮತ್ತು ಸಂಶೋಧನೆಗಳು ನಮ್ಮ ಭಾಷೆಯಲ್ಲಿಯೇ ನಡೆಯಬೇಕು. ಈ ದಿಸೆಯಲ್ಲಿ ನಮ್ಮ ವಿಶ್ವವಿದ್ಯಾನಿಲಯಗಳು, ಸರ್ಕಾರಗಳು, ಜನಸಮುದಾಯಗಳು ಪ್ರಯತ್ನಿಸಬೇಕು. ಕನ್ನಡವನ್ನು ನಾವು ಕಳೆದುಕೊಳ್ಳಬಾರದು. ಕ್ರಿಯಾಶೀಲವಾಗಿ ಕನ್ನಡದ ಬೆಳವಣಿಗೆಯಲ್ಲಿ ತೊಡಗಿಕೊಳ್ಳುವ ಸಂಕಲ್ಪವನ್ನು ನಾವೆಲ್ಲರೂ ಸ್ವೀಕರಿಸಬೇಕು.

ಈ ಬಾರಿಯ ಬೆಳಕಿನ ಹಬ್ಬ ದೀಪಾವಳಿಯಲ್ಲಿ ಪರಿಸರದ ಕಾಳಜಿ ಹೆಚ್ಚಾಗಿ ಸಾರ್ವಜನಿಕರಲ್ಲಿ ಕಂಡುಬರುತ್ತಿರುವುದು ಸಂತೋಷದ ವಿಷಯ. ಆದಾಗ್ಯೂ ಕೆಲವು ಮಕ್ಕಳು ಕಣ್ಣಿಗೆ ಹಾನಿ ಮಾಡಿಕೊಂಡಿದ್ದಾರೆ. ಈ ಬಗ್ಗೆ ಇನ್ನೂ ಹೆಚ್ಚಿನ ಜಾಗೃತಿಯನ್ನು ಸಮಾಜದಲ್ಲಿ ಮೂಡಿಸಬೇಕಾಗದ್ದು ಸ್ಕೌಟ್ಸ್ ಗೈಡ್ಸ್‌ಗಳಾದ ನಮ್ಮ ಕರ್ತವ್ಯವಾಗಿದೆ.



ನವೆಂಬರ್ 7 ರಂದು ಧ್ವಜದಿನವನ್ನು ಆಚರಿಸಿದೆವು. ಜಿಲ್ಲೆ, ತಾಲ್ಲೂಕು, ನಗರ ಮತ್ತು ಸ್ಥಳೀಯ ಘಟಕಗಳು ಅದ್ದೂರಿಯಾಗಿ ಧ್ವಜದಿನವನ್ನು ಆಚರಿಸಿದ ವರದಿಗಳು ಬಂದಿದೆ. ಆಯಾ ಪ್ರದೇಶದಲ್ಲಿರುವ ಪ್ರಮುಖ ಸಾರ್ವಜನಿಕ ವ್ಯಕ್ತಿಗಳು ಮತ್ತು ಅಧಿಕಾರಿಗಳನ್ನು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭೇಟಿಯಾಗಿದ್ದಾರೆ. ಧ್ವಜ ದಿನವು ನಮ್ಮ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ಸಾರ್ವಜನಿಕರಿಗೆ ತಿಳಿಸುವ ಸಂದರ್ಭ. ನಮ್ಮ ಚಳವಳಿಯ ಇತಿಹಾಸವನ್ನು ಮಕ್ಕಳಿಗೆ ತಿಳಿಸುವ ಸಂದರ್ಭ. ನುರಿತ ತರಬೇತಿ ಪಡೆದ ಸ್ಕೌಟರ್ ಮತ್ತು ಗೈಡರ್‌ಗಳು ಈ ಸಂವಹನ ಕಾರ್ಯವನ್ನು ಬಹಳ ಯಶಸ್ವಿಯಾಗಿ ಮಾಡುತ್ತಿರುವುದು ನನಗೆ ಹೆಮ್ಮೆಯನ್ನುಂಟುಮಾಡಿದೆ. ಪ್ರಚಾರ ಕಾರ್ಯವು ಧ್ವಜದಿನಕ್ಕೆ ಮಾತ್ರ ಸೀಮಿತಗೊಳ್ಳದಿರಲಿ. ಪ್ರತಿ ದಿನವೂ ಧ್ವಜದಿನವಾಗಲಿ ಎಂಬುದು ನನ್ನ ಆಶಯ.



ಕರ್ನಾಟಕ ದರ್ಶನದ ಚಟುವಟಿಕೆಗಳು ಆರಂಭವಾಗಿವೆ. ಇದಕ್ಕೆ ಸಂಬಂಧಿಸಿದ ಸುತ್ತೋಲೆಯನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ. ಕರ್ನಾಟಕ ದರ್ಶನ ಧ್ಯೇಯೋದ್ದೇಶಗಳನ್ನು ನೀವು ಬಲ್ಲಿರಿ. ಶಿಕ್ಷಣ, ಸಹಜೀವನ, ಸಹಕಾರ, ಹೊಂದಾಣಿಕೆ, ನಾಯಕತ್ವ, ಪರಿಸರ ದರ್ಶನ, ಇತಿಹಾಸ ಅರಿವು, ಪ್ರಾದೇಶಿಕ ಕನ್ನಡ ಭಾಷೆಯ ವೈವಿಧ್ಯಗಳು, ವೀಕ್ಷಣೆ, ಮೌಖಿಕ ಮತ್ತು ಲಿಖಿತ ಕೌಶಲ್ಯಗಳ ಸಂವರ್ಧನೆ, ಈ ಬೃಹತ್ ಕಾರ್ಯಕ್ರಮದ ಭಾಗವಾಗಿದೆ. ಇದು ನಾಲ್ಕನೆಯ ವರ್ಷ. ನಮ್ಮ ಚಟುವಟಿಕೆಯನ್ನು ಮೆಚ್ಚಿ ಕರ್ನಾಟಕ ಸರ್ಕಾರವು 10 ರಿಂದ 20 ಸಾವಿರ ಮಕ್ಕಳಿಗೆ ಈ ಸೌಲಭ್ಯವನ್ನು ಹೆಚ್ಚಿಸುವುದಾಗಿ ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಹೆಚ್.ಡಿ. ಕುಮಾರಸ್ವಾಮಿರವರು ಆಶ್ವಾಸನೆಯನ್ನು ನೀಡಿದ್ದಾರೆ.

ಮಕ್ಕಳೆ, ನೀವೆಲ್ಲರೂ ಜಾಗೃತವಾಗಿ ಪ್ರವಾಸ ಮಾಡಿ ಬನ್ನಿ. ನಿಮ್ಮ ಪ್ರವಾಸ ಅನುಭವವನ್ನು ಲಿಖಿತ ರೂಪದಲ್ಲಿ ನನಗೆ ಕಳುಹಿಸಿ. ಅವುಗಳನ್ನು ಓದಲು ನಾನು ಬಹಳ ಉತ್ಸುಕನಾಗಿದ್ದೇನೆ. ಮುಖ್ಯ ಮಂತ್ರಿಗಳೂ ಸೇರಿದಂತೆ, ಸರ್ಕಾರದ ಮಂತ್ರಿಗಳು ಮತ್ತು ಅಧಿಕಾರಿಗಳು ಕೂಡ ನಿಮ್ಮ ಅನುಭವವನ್ನು ಕುತೂಹಲದಿಂದ ಗಮನಿಸುತ್ತಿದ್ದಾರೆ. ನಾನು ನಿಮ್ಮಲ್ಲಿ ವೀಕ್ಷಣೆ ಮತ್ತು ಬರವಣಿಗೆಯ ಕೌಶಲ್ಯವನ್ನು ಹೆಚ್ಚಿಸುವ ದೃಷ್ಟಿಯಿಂದ ಸ್ಪರ್ಧೆ ಯೊಂದನ್ನು ಏರ್ಪಡಿಸುತ್ತಿದ್ದೇನೆ. ನಾಲ್ಕು ಪುಟಗಳಿಗೆ ಮೀರದಂತೆ ನಿಮ್ಮ



ಅನುಭವವನ್ನು ನನಗೆ ಕನ್ನಡ ಅಥವಾ ಇಂಗ್ಲೀಷ್‌ನಲ್ಲಿ ಬರೆದು ಕಳುಹಿಸಿ. ಅತ್ಯುತ್ತಮವಾದ ಲೇಖನಗಳಿಗೆ ಬಹುಮಾನವನ್ನು ನಮ್ಮ ಸಂಸ್ಥೆಯಿಂದ ನೀಡುತ್ತೇವೆ ಮತ್ತು ವಾರ್ತಾ ಪತ್ರದಲ್ಲಿ ಪ್ರಕಟಿಸುತ್ತೇವೆ. ಸಾಧ್ಯವಾದರೆ ಇಂತಹ ಸ್ಪರ್ಧೆಗಳನ್ನು ಜಿಲ್ಲಾ ಮಟ್ಟದಲ್ಲೂ ಏರ್ಪಡಿಸಲು ಜಿಲ್ಲಾ ಸಂಸ್ಥೆಗಳಿಗೆ ಈ ಮೂಲಕ ಸೂಚಿಸುತ್ತೇನೆ.

ನಮ್ಮ ತರಬೇತಿ ಕಾರ್ಯಕ್ರಮಗಳು ಎಂದಿನಂತೆ ನಡೆಯುತ್ತಿವೆ. ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ನಾವು ಶಿವಮೊಗ್ಗ, ಬೆಂಗಳೂರು, ಮೈಸೂರು, ಬಳ್ಳಾರಿ, ಕಲ್ಬುರ್ಗಿ ಮತ್ತು ಬೆಳಗಾವಿ ಕೇಂದ್ರಗಳಲ್ಲಿ ಕರ್ನಾಟಕದ ಎಲ್ಲಾ ಜಿಲ್ಲೆಗಳ ಉಪನಿರ್ದೇಶಕ-ರುಗಳು (ಆಡಳಿತ & ಅಭಿವೃದ್ಧಿ), ಕ್ಷೇತ್ರಶಿಕ್ಷಣಾಧಿಕಾರಿಗಳು ಮತ್ತು ಜಿಲ್ಲಾ / ತಾಲ್ಲೂಕು ನೋಡೆಲ್ ಅಧಿಕಾರಿಗಳಿಗೆ ಒಂದು ದಿನದ ಮಾಹಿತಿ ಶಿಬಿರ ಏರ್ಪಡಿಸಿದ್ದೇವೆ. ಸ್ಕೌಟ್ ಚಳವಳಿಯ ವಿಸ್ತರಣೆಗೆ ಸರ್ಕಾರದ ಸಹಾಯ ಅತ್ಯಂತ ಅವಶ್ಯಕ. ಈ ಮಾಹಿತಿ ಶಿಬಿರದ ಮೂಲಕ ನಾವು ಹೆಚ್ಚಿನ ಸಾಧನೆಯನ್ನು ಮಾಡಬಹುದೆಂದು ನಾನು ನಂಬಿದ್ದೇನೆ.



ನವೆಂಬರ್ 14ರಿಂದ ನಮ್ಮ ಸಂಸ್ಥೆಯ ಆಡಳಿತ ವ್ಯವಸ್ಥೆಯಲ್ಲಿ ಸ್ವಲ್ಪ ಬದಲಾವಣೆಯಾಗಿದೆ. ಇಷ್ಟು ದಿವಸ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ರಾಜ್ಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಚಿನ್ನಸ್ವಾಮಿ ರೆಡ್ಡಿ ಅವರು ವೈಯಕ್ತಿಕ ಕಾರಣಗಳಿಗಾಗಿ ರಾಜೀನಾಮೆಯನ್ನು ನೀಡಿದ್ದಾರೆ. ಅವರ ಸ್ಥಾನದಲ್ಲಿ ಶ್ರೀ ಕೆ. ಗಂಗಪ್ಪಗೌಡ ಅವರನ್ನು ನೇಮಕ ಮಾಡಲಾಗಿದೆ.



ಶ್ರೀ ಚಿನ್ನಸ್ವಾಮಿ ರೆಡ್ಡಿ ಅವರು ಹಲವಾರು ದಶಕಗಳಿಂದ ಸ್ಕೌಟ್ ಚಳವಳಿಯ ಬೆಳವಣಿಗೆಗೆ ಅಪಾರ ಕಾಣಿಕೆಯನ್ನು ನೀಡಿದ್ದಾರೆ. ಸಂಸ್ಥೆಯ ವಿವಿಧ ಹುದ್ದೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಚಟುವಟಿಕೆಗಳನ್ನು ನಿರ್ದೇಶಿಸಿದ್ದಾರೆ. ಕಾರ್ಯಕ್ರಮಗಳನ್ನು ರೂಪಿಸಿದ್ದಾರೆ. ಇವರು ರಾಷ್ಟ್ರಪ್ರಶಸ್ತಿ ವಿಜೇತ ಶಿಕ್ಷಕರು ಮತ್ತು ರಾಷ್ಟ್ರಪ್ರಶಸ್ತಿ ಬೆಳ್ಳಿ ಆನೆ ಪಡೆದ ಸ್ಕೌಟರ್. ತಮ್ಮ ಶಿಕ್ಷಕ ವೃತ್ತಿಯ ಜೊತೆಗೆ ಸ್ಕೌಟಿಂಗ್ ಅನ್ನು ಸ್ವ-ಇಚ್ಛೆಯಿಂದ ಆರಿಸಿಕೊಂಡು ತಮ್ಮ ಸಮಯ ಮತ್ತು ಶಕ್ತಿಯನ್ನು ಚಳವಳಿಗಾಗಿ ಧಾರೆ ಎರೆದವರು. ರಾಷ್ಟ್ರೀಯ ಮತ್ತು

ಅಂತರರಾಷ್ಟ್ರೀಯ ಸ್ಕೌಟ್ ಚಳವಳಿಯ ಭಾಗವಾಗಿದ್ದವರು. 2015-16ರಲ್ಲಿ ಮೈಸೂರಿನಲ್ಲಿ ನಾವು ನಡೆಸಿದ 17ನೇ ರಾಷ್ಟ್ರೀಯ ಜಾಂಬೂರಿಯ ಸಮನ್ವಯಕಾರರಾಗಿ ಶ್ರೀ ಚಿನ್ನಸ್ವಾಮಿ ರೆಡ್ಡಿ ಅವರು ಶ್ರಮಿಸಿದ್ದರು. ಇನ್ನು ಮುಂದೆಯೂ ಸ್ಕೌಟ್ ಚಳವಳಿಯ ಜೊತೆ-ಜೊತೆಗೆ ಹೆಚ್ಚೆಹಾಕಿ ಸೇವಾ ಕಾರ್ಯದಲ್ಲಿ ತೊಡಗಿಕೊಳ್ಳುತ್ತಾರೆ ಎಂದು ನಾನು ಆಶಿಸುತ್ತೇನೆ. ಶ್ರೀ ಚಿನ್ನಸ್ವಾಮಿ ರೆಡ್ಡಿ ಅವರಿಗೆ ನಮ್ಮ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಹೊಸದಾಗಿ ಸಂಸ್ಥೆಯ ರಾಜ್ಯ ಕಾರ್ಯದರ್ಶಿಗಳಾಗಿ ನಿಯುಕ್ತರಾಗಿರುವ ಶ್ರೀ ಕೆ. ಗಂಗಪ್ಪಗೌಡ ಅವರು ಬಹುಮುಖ ಪ್ರತಿಭೆಯುಳ್ಳವರು. ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ನಿರ್ದೇಶಕರಾಗಿ ನಿವೃತ್ತರಾದವರು. ವಿದ್ಯಾ ಇಲಾಖೆಯಲ್ಲಿ ವಿವಿಧ ಹುದ್ದೆಗಳನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸಿದವರು. ಅಪಾರವಾದ ಅನುಭವ ಮತ್ತು ವಿದ್ಯಾಭ್ಯಾಸದ ಹಿನ್ನೆಲೆಯನ್ನು ಉಳ್ಳವರಾಗಿದ್ದಾರೆ. ನಮ್ಮ ಸಂಸ್ಥೆಯಲ್ಲಿ ಹಲವಾರು ಹುದ್ದೆಗಳಲ್ಲಿ ಕ್ರಿಯಾಶೀಲವಾಗಿ ತೊಡಗಿಕೊಂಡು ತಮ್ಮ ಸಾಮರ್ಥ್ಯವನ್ನು ತೋರಿಸಿದ್ದಾರೆ. ಶ್ರೀಯುತರು ಪ್ರಸಕ್ತ ಜಂಟಿ ರಾಜ್ಯ ಕಾರ್ಯದರ್ಶಿಯಾಗಿದ್ದರು.



ರಾಜ್ಯ ಕಾರ್ಯದರ್ಶಿಯ ಜವಾಬ್ದಾರಿಯನ್ನು ನಿರ್ವಹಿಸಲು ಶ್ರೀ ಕೆ. ಗಂಗಪ್ಪಗೌಡ ಅವರು ಸೂಕ್ತ ವ್ಯಕ್ತಿ ಎಂದು ನಾನು ನಂಬಿದ್ದೇನೆ. ಅವರಿಗೆ ಹೊಸ ಆಲೋಚನೆಗಳಿವೆ. ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ವಿಸ್ತೃತಗೊಳಿಸುವುದರ ಜೊತೆಗೆ ಹೊಸ ಅಂಶಗಳನ್ನು ಚಳವಳಿಯ ಅಂತಸ್ಸತ್ವದ ಭಾಗವನ್ನಾಗಿ ಮಾಡಬಯಸಿದ್ದಾರೆ. ರೋವರ್ಸ್ / ರೇಂಜರ್ಸ್ ಚಟುವಟಿಕೆಗಳ ವಿಸ್ತರಣೆ, ಸಾಮಾಜಿಕ ಜಾಗೃತಿ ಮುಂತಾದವು ಅವರ ಪಟ್ಟಿಯಲ್ಲಿವೆ. ನಾನು ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮುಖ್ಯ ಆಯುಕ್ತನಾಗಿ, ಶ್ರೀ ಗಂಗಪ್ಪಗೌಡರ ಸಹಸ್ಕೌಟರ್ ಆಗಿ, ಗೆಳೆಯನಾಗಿ ಅವರಿಗೆ ಸಂಸ್ಥೆಯ ಬೆಳವಣಿಗೆಗೆ ಪೂರಕವಾಗುವಂತಹ ಎಲ್ಲಾ ಸಹಕಾರಗಳನ್ನೂ ನೀಡುತ್ತೇನೆ. ನಿಮ್ಮೆಲ್ಲರಿಂದಲೂ ಇಂತಹ ಸಹಕಾರವನ್ನು ನಿರೀಕ್ಷಿಸುತ್ತೇನೆ. ನಿಮ್ಮೆಲ್ಲರ ಪರವಾಗಿ ಶ್ರೀ ಗಂಗಪ್ಪಗೌಡರವರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.



ಜನಪ್ರಿಯ ರಾಜಕೀಯ ಮುಖಂಡರಾಗಿದ್ದ, ಬೆಂಗಳೂರು ಲೋಕಸಭಾ ಕ್ಷೇತ್ರದ ಸದಸ್ಯರಾದ ನನ್ನ ಆತ್ಮೀಯ ಗೆಳೆಯರಾದ ಶ್ರೀ ಹೆಚ್.ಎನ್. ಅನಂತ ಕುಮಾರ್ ಅವರ ಅಕಾಲಿಕ ನಿಧನವು ನನ್ನ ಮನಸ್ಸನ್ನು ಕಲಕಿದೆ. ನನ್ನೊಂದಿಗೆ ಕೂಡಿ ಸಾರ್ವಜನಿಕ ಜೀವನದಲ್ಲಿ ಶ್ರೀ ಹೆಚ್.ಎನ್. ಅನಂತ ಕುಮಾರ್ ಅವರು ಕೆಲಸ ಮಾಡಿದರು. ಅವರು ಕೇವಲ ಕನಸುಗಾರರಾಗಿರಲಿಲ್ಲ. ಮಾತಿನಲ್ಲಿ ಮಹಲುಗಳನ್ನು ಕಟ್ಟಲಿಲ್ಲ. ಬದಲಾಗಿ ಮನಸ್ಸಿನಲ್ಲಿ ಹುಟ್ಟಿದ ಕನಸುಗಳಿಗೆ ವಾಸ್ತವದ ಸ್ವರೂಪವನ್ನು ನೀಡಿದರು. ಮಾತುಗಳನ್ನು ಕೃತಿಗಿಳಿಸಿದರು. ಕೇಂದ್ರ ಮಂತ್ರಿಯಾಗಿ ಅಪಾರವಾದ ಜನಪರ ಕೆಲಸಗಳನ್ನು ಅವರು ಮಾಡಿದ್ದಾರೆ. 22 ವರ್ಷಗಳ ಕಾಲ ಅವರು ದೆಹಲಿಯಲ್ಲಿ ಕರ್ನಾಟಕದ ಸಮರ್ಥ ಪ್ರತಿನಿಧಿಯಾಗಿದ್ದರು. ಪಕ್ಷಾತೀತವಾಗಿ ಶ್ರಮಿಸಿ ನಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದರು. ಕರ್ನಾಟಕದ, ಅಷ್ಟೇಕೆ ಭಾರತದ ಸಾರ್ವಜನಿಕ ಮತ್ತು ರಾಜಕೀಯ ಜೀವನಕ್ಕೆ ಶ್ರೀ ಅನಂತ ಕುಮಾರ್ ಅವರ ನಿಧನವು ನಿಜವಾಗಿಯೂ ತುಂಬಲಾರದ ನಷ್ಟವಾಗಿದೆ. ಶ್ರೀ ಅನಂತ ಕುಮಾರ್ ಅವರ ಜೀವನ ಸಂಗಾತಿ ಶ್ರೀಮತಿ ತೇಜಸ್ವಿನಿ ಅನಂತ ಕುಮಾರ್ ಅವರು ನಮ್ಮ ಸಂಸ್ಥೆಯ ಉಪಾಧ್ಯಕ್ಷರಾಗಿದ್ದಾರೆ. ಅವರ ಮತ್ತು ಅವರ ಕುಟುಂಬದ ನೋವಿಗೆ ನಾವು ಸ್ಪಂದಿಸುತ್ತಿದ್ದೇವೆ. ದೇವರು ಈ ಅಪಾರ ನಷ್ಟವನ್ನು ತಡೆದುಕೊಳ್ಳುವ ಶಕ್ತಿಯನ್ನು ಶ್ರೀ ಹೆಚ್.ಎನ್. ಅನಂತ ಕುಮಾರ್ ಅವರ ಕುಟುಂಬಕ್ಕೆ ನೀಡಲಿ ಎಂದು ಪ್ರಾರ್ಥಿಸುತ್ತೇನೆ.





ಮಾಜಿ ಕೇಂದ್ರ ಸಚಿವ ಹಾಗೂ ರಾಜ್ಯದ ಹಿರಿಯ ನಾಯಕರಾಗಿದ್ದ ಶ್ರೀ ಸಿ.ಕೆ. ಜಾಫರ್ ಷರಿಫ್ ಅವರ ನಿಧನಕ್ಕೆ ಸಂತಾಪ ಸೂಚಿಸುತ್ತೇನೆ, ಹಾಗೆಯೇ ಹಿರಿಯ ಕಲಾವಿದ, ರಾಜಕೀಯ ನೇತಾರ ಶ್ರೀ ಅಂಬರೀಶ್ ಅವರ ಅಕಾಲಿಕ ನಿಧನಕ್ಕೆ ಸಂತಾಪವನ್ನು ಸೂಚಿಸುತ್ತೇನೆ. ಈ ಇಬ್ಬರು ಹಿರಿಯ ನಾಯಕರ ಸಾಮಾಜಿಕ ಕಾಣಿಕೆಗಳ, ಸೇವೆಯ ಬಗ್ಗೆ ಮುಂದಿನ ಸಂಚಿಕೆಯಲ್ಲಿ ವಿವರವಾಗಿ ಪ್ರಕಟಿಸಲಾಗುವುದು.

ಇನ್ನೊಂದು ತಿಂಗಳಲ್ಲಿ ಪ್ರಸಕ್ತ ಶಕವರ್ಷ 2018 ಮುಕ್ತಾಯವಾಗಲಿದೆ. ನಾವು ಈ ವರ್ಷದಲ್ಲಿ ಜಾರಿಗೊಳಿಸಲು ಮಾಡಿದ ನಿರ್ಣಯಗಳೇನು? ಜಾರಿಯಾಯಿತೇ? ಅಕಸ್ಮಾತ್ ಜಾರಿಗೊಳಿಸುವುದರಲ್ಲಿ ನಾವು ವಿಫಲರಾಗಿದ್ದರೆ ಅದಕ್ಕೆ ಕಾರಣವೇನು? ಎಂಬುದನ್ನು ವಿಶ್ಲೇಷಿಸಬೇಕು. ಸತತ ಚಿಂತನೆ ಮತ್ತು ವಿಶ್ಲೇಷಣೆಯೇ ವ್ಯಕ್ತಿತ್ವ ವಿಕಸನದ ಸಂಕೇತವಾಗಿದೆ. ನಮ್ಮನ್ನು ನಾವು ನಿರುಕಿಸಲು ಅಂಜಬಾರದು. ಎಲ್ಲರೂ ಒಟ್ಟಾಗಿ ಕ್ರಿಸ್‌ಮಸ್ ಆಚರಿಸೋಣ. 2019ರ ಹೊಸವರ್ಷವನ್ನು ಸ್ವಾಗತಿಸಲು ಅಣಿಯಾಗೋಣ. ಜೊತೆಗೆ ಚಿಂತನೆ ಮಾಡೋಣ. ಹೊಸ ವರ್ಷದ ನಿರ್ಣಯಗಳೇನು.

**ನಾವೆಲ್ಲರೂ ಒಗ್ಗಟ್ಟಾಗಿ, ನವ ಜಗತ್ತನ್ನೂ, ಭಾರತವನ್ನು ಕಟ್ಟೋಣ.**

ತಮ್ಮ ವಿಶ್ವಾಸಿ

**(ಪಿ.ಜಿ.ಆರ್. ಸಿಂಧ್ಯ)**

**ರಾಜ್ಯ ಮುಖ್ಯ ಆಯುಕ್ತರು**

# OUR RESPECTFUL GRATITUDE



We Pay Our Humble Pranams & Deep Sense of Gratitude to the Divine Presence of Bhagawan Sri Sathya Sai Baba and Sri Sri Madhusudhan Guruji of Sri Sathya Sai Loka Seva Institutions and the Chairman and Trustees of Sri Sathya Sai Loka Seva Trust for all the Guidance, Support and Help given by them to Bharat Scouts and Guides in Successfully Organizing the National Level Rovers and Rangers Moot held at their Campus from 1st November to 4th November 2018.

We seek the Blessings of Sri Sri Madhusudhan Guruji, Chairman & Trustees of Sri Sathy Sai Lokha Seva Trust in all our Future Programmes & Activities.

# NATIONAL LEVEL ROVER – RANGER MOOT






It is a century ago that the importance of the scout movement was realized and also the requirement for the same to be introduced to the youth worldwide. The Bharat Scouts & Guides, Karnataka state gracefully took up this task of concluding the centenary celebration by hosting the "Moot" for Rovers and Rangers across India from 1st to 5st November at Sri Sathya Sai Grama, Muddenahalli, Chikkaballapura District, Karnataka was identified in co-ordination with Sri Sathya Sai Institutions.

The Moot had Sri P. G. R. Sindhia, State Chief Commissioner, The Bharat Scouts & Guides, Karnataka as the Moot chief. Ms. P. Saroja, former director, The Bharat Scouts & Guides – NHQ and District Chief Commissioner, Bangalore North district association was appointed as the overall in-charge of the Moot.Sri Lokesh, Asst. State Secretary and Sri Prabhakar Bhat, State Organizing Commissioner (S) of The Bharat Scouts & Guides, Karnataka were in-charge of the general co-ordination, execution and facilitation. Sri Jitesh Arun Sheth Assistant State Commissioner, The Bharat Scouts & Guides, Karantaka state was involved as the program coordinator assisted by Sri Sarath Raj of National Headquarters. Sri Arun Chandra pattar, assistant director – southern region was deputed as program arrangement & protocol officer while Ms. KritiChandwani, regional organizing commissioner – southern region was assigned with registration and secretariat of the Moot.

The arrivals began as early as 31st of Oct 2018 and continued until end of 01st November 2018 and around 1500 participants from 27 states were allocated into 4 different sub-camps – 2 for rovers and 2 for rangers.

While each section had a camp chief, each sub-camp had a sub-camp chief and deputy sub-camp chief for effective execution of the program.

Camp chiefs and deputy chiefs :

| Section | Camp Chief | Deputy Camp Chief |
|---|---|---|
| Rover | Prof. A. S. Chandrashekar, RSL | Sri Ganapathi |
| Ranger | Ms. Ruby Parbat, NHQ | Smt. ShanthaKumari |

| Section | Sub-camp | Sub-camp chief | Deputy Sub-camp chief |
|---|---|---|---|
| Rover | Skandagiri | Sri A. Ganesh<br>S. E. C. Railways | Sri Santosh Huggi<br>RSK |
| | Nandagiri | Sri Arpudharaj<br>S. W. C. Railways | Sri Shantha Kumar<br>Mallapur |
| Ranger | Krishna | Smt. Malleshwari | Smt. Prabha |
| | Kaveri | Smt. Kriupa Sindhu | Smt. Vandana |

Post settling down, we had a formal flag ceremony in the arena marking the beginning of the event. The Moot chief & state chief commissioner, Karnataka Sri P. G. R. Sindhia welcomed the gathering giving them insight into all the aspects of program.

Following the key-note speech was integration session by Sri Sathya Sai LokaSeva Group Of Institutions providing insight to the participants on the institution, its belief and practices. All the participants were invited to kannada Rajyothsava celebrations post settling down, later that evening.

The participants from the state of Karnataka under the leadership of Smt. Manjula, State Organizing Cocmmissioner(G), The Bharat Scouts & Guides – Karnataka, presented the Kannada folklore. Candles were lit by all the participants while the song of "HachchuvevuKannadada Deepa" was being played

## 2nd November 2018

**Inauguration:** The Moot was formally inaugurated by lighting of lamp by Sri Vajubhai Vala, Hon'ble Governor of Karnataka and other dignitaries present followed by presidential address by Sri M. A. Khalid, National Commissioner(S) and State Commissioner(S), The Bharat Scouts & Guides who stressed upon the need for well-being, love for fellow-being and service to play the key role in development of Nation.

Earlier Sri P. G. R. Sindhia, Moot Chief & State Chief Commissioner – Karnataka state welcomed the honorable Governor of Karnataka on behalf of The Bharat Scouts & Guides by assuring him of honest effort being put in towards fulfilling his wishes towards the growth of Scouting / Guiding movement in Karnataka.

Sri Narasimha Murthy, Chancellor of Sri Sathya Sai University for Human Excellence, Gulbarga and Sri Narayan Rao, Secretary, Sri Sathya Sai Loka Seva Group of Institutions and Dr. Sudhakar, Hon'ble MLA, Chikkaballapur were on the Dais.

The divine presence of Bhagwan Sri Sathya Sai Baba was present who showered his blessings through Brother Madhusudan. He expressed his happiness of hosting the Moot and appreciated celebration of brotherhood in the form of Moot.



Following this was the address by the Honorable Governor of Karnataka Sri VajubhaiVala. The Honorable Governor of Karnataka spoke of "Tilak karo mitti se, yeh mitt ihain balidaan ki" - This was elaborated to indicate the love for country to be foremost while the rest to follow. He stressed on the strength of youth.

Sri M. S. Satheesh, district secretary, Bangalore South District association proposed vote of thanks. With event now formally declared open, it was time for Retd. Major General V.P.S. Bhakuni, who was Commandant Selection Centre South, Bengaluru with 37 years of service.

He shared inputs with the participants on the intricacies of recruitment with armed forces and the concern on rightly guiding youth towards the same.The interactive session was really encouraging and enthralling with the urge to join Indian armed forces getting resilient.

This was followed by Q&A session addressing the doubts participants had.

**Integration session :** An interactive session inclusive of group discussion was carried out amongst the participants. This was the session wherein the participants were deeply engaged into the topics on how they can contribute towards the development of self, community and in turn nation.

**Exhibition :** India is a diversified country when it comes to language, culture, food, clothing, etc.. To demonstrate the same, an exhibition was organized under the leadership of Smt. Manjula, State Organizing Commissioner (G), The Bharat Scouts & Guides, Karnataka. The participants were expressive and proud of demonstrating their culture and explaining the same to visitors. It was eye sparking to see so many cultures & traditions under one roof.

**Band Display :** The band troupe consisting of students from the Sri Sathya Sai institutions performed in the evening of 2nd of November.

## 03rd November 2018

The day began with morning jerks followed by flag ceremony and breakfast. While the first session was on the Gandhian ideology and its impact on today's world. Around 150 participants were selected to participate in the community development activity – "Akshaypatra". These participants were taken to 10 different schools where the institution would send across the meal to be served. The participants not only served the meal but also had good time with students there, teaching them games, songs and certain tips & tricks. The students were enthralled by this activity and were requesting for more such events.



**Interactive session:** The speaker was Sri L. Narashimhaiah from Tumakuru who has 33 years of experience as a High school teacher. He touched upon socialism, untouchability, communal harmony, corruption, and how the youth of the country had recently demonstrated their ability to be part of a positive change. He urged them to be the change they want to see and offered a simple solution for a society free of corruption: simple living.

**Adventure:** The location being amidst nature lore provided us the best of support to set up adventure activities. The hillock situated just at the boundary of campus enabled to set up of activities such as rock climbing, rappelling and zipline. In addition to the above, rope climbing, ladder crossing, self-pulling, rope ladder climb, rifle shooting and archery were experienced by the participants.

**Fun & Intellectual:** As part of fun games, new variants were tried out considering the age group and the taste of youth. Games such as four legged race, hands & legs, pick-a-back relay were well received by participants who enjoyed the moments while using their grey matter to ensure win.

To challenge their thought process and get valuable inputs, following activities were executed:

- Debate
- Group discussion
- Hyde park talk [pick & speak]
- Quiz

**WAGGGS & WOSM Initiatives:** The WOSM and WAGGGS initiatives such as Messengers of peace, surf smart, free being me etc., were executed.

**Valedictory:** The valedictory program started on schedule at 16:30 hours with prayer. This was followed by the welcome address by Sri M. A. Challaiah, Nodal officer, BBMP institutions, The Bharat Scouts & Guides, Karnataka. Dignitaries present on the dais were Sri P. G. R. Sindhia, Moot chief and State Chief Commissioner, The Bharat Scouts & Guides, Karnataka, Brother Madhusudan in the presence of Bhagwan Sri Sathya Sai Baba, Sri Arup Sarkar, Moot Leader and Assistant Director, National Headquarters, Dr. GururajaKarajagi, Chairman, academy of creative teaching, Smt. Shukla Bose, founder & CEO, Parikrma, Sri B. N. Narasimha Murthy, Chancellor, Sri Sathya Sai University for Human Excellence, Smt. GeethaNataraj, vice-president, The Bharat Scouts & Guides and State Commissioner(G) for Karnataka, Smt. BharathiChandrashekar, vice-president, The Bharat Scouts & Guides, Karnataka, Sri PrabhudevaChigateri, Treasurer, The Bharat Scouts & Guides, Karnataka, Sri Gangappa Gowda, Joint State Secretary, The Bharat Scouts & Guides, Karnataka, Sri Shrikanth, co-ordinator, collegiate education.



In his valedictory address to the participants, Dr. GururajaKarajagi inspired the gathering starting with the story of "Balloon Shower" explaining the importance of giving back to the society. In addition the below key points were shared

- Doing is value, saying is not
- Difference between reaction & response
- Living for others
- Giving back to the society

In her address to the Moot, Smt. Shukla Bose touched upon the importance of women in the society and child education.

Moot chief and state chief commissioner, Sri P. G. R. Sindhia shared his experience with Baba around 50 years ago during his student days and the positive impact it has made to his life.He highlighted the importance of youth in the country and that there are expectations already set. He mentioned the sacrifice and life time contribution of Smt. Shukla Bose for the under privileged children and towards the society which is an example to be followed.With reference to Dr. Karajagi, he mentioned of him being not just educationist but a great humanitarian inspiring humans while the Honorable governor of Karnataka, Sri Vaju Bhai Valahas inspired the participants on patriotism.

**Grand campfire & Folk fest:** The evening of 03rd of November witnessed two mega events clubbed into a single one lead by Sri M. V. Janardhan, Leader Trainer(S) and Smt. Shanta Kumari, Ranger Leader supported by Smt. Malleshwari, ASOC, Bellary&Koppal District. While all the participating states were presenting for folk fest, each sub-camp had prepared for campfire participation which would have participants from multiple states.

## 04th November 2018

The day began with a sacred note of "All Faiths Prayer" under the leadership of Smt. Shamala, State Training Commissioner (G), The Bharat Scouts & Guides, Karnataka.

All the participants & staff had assembled in the main hall of "Premamrutham" and could experience the divine blessings and vibrancy.

The activities of adventure, fun & intellectual and WAGGGS & WOSM initiatives continued further until lunch.

Report by:

**Smt. P. Saroja**
DCC, Bengaluru North
& Moot Programme Convenor

**Sri Jithesh Arun Shet**
Assistant State Commissioner (Scouts)
Moot Programme Co-ordinator







**P.G.R. SINDHIA,** B.E. (Civil)
STATE CHIEF COMMISSIONER
Former Minister for Finance,
Home, Industries & Transport
Govt. of Karnataka



State Headquarters
No. 39, "Shanthigruha"
Palace Road
Bengaluru-560 001

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

**THE BHARAT SCOUTS & GUIDES, KARNATAKA**

Ref : No. BSG/SHQ/2165/2018-19 (2)

Date : 14/11/2018

## Office Order

Sub: Appointment of Sri K.Gangappa Gowda (Retd., Director of Public Instructions, Primary & Secondary) State Joint Secretary (Scouts), BSG-Karnataka as State Secretary, BSG-Karnataka -reg.

Ref: office order No. BSG/SHQ/2165/2018-19 (1) dated 14th Nov. 2018

---

In exercise of the powers vests under Rule 56 (1) (a) of Rules of BSG, Karnataka, Sri K.Gangappa Gowda, State Joint Secretary (Scouts), BSG, Karnataka is appointed as State Secretary, BSG-Karnataka, No.39, Shanthigruha, Palace Road, Bangalore-560 001, w.e.f. 14/11/2018 afternoon and until further orders, against the vacancy caused due to resignation of Sri Chinnaswamy Reddy for the post of State Secretary, BSG, Karnataka.

Sri K.Gangappa Gowda, State Secretary, BSG-Karnataka, has been delegated the powers of co-signatory of BSG-Karnataka w.e.f. 14/11/2018 afternoon and also to sign to State Huzur Treasury Bills of BSG and to operate the Bank Accounts of BSG-Karnataka.

(P.G.R.Sindhia)
State Chief Commissioner,
Bharat Scouts & Guides, Karnataka

Shri K.Gangappa Gowda,
No.96, "Taliru", 1st Main, 4th cross,
Ittamadu, BSK 3rd stage, Bangalore-560 085.

Ph : (Off): 080-22343400 / 22260017
Res : 080-26582711/26586725
shq@bsgkarnataka.org
www.bsgkarnataka.org
Mob : 09845371958
pgrsindhia@gmail.com

# BIO-DATA OF K. GANGAPPA GOWDA



Former Director of Public Instruction (Primary Education) Govt. of Karnataka, Bengaluru appointed as State Secretary, The Bharat Scouts and Guides, Karnataka

| | |
|---|---|
| **Name and Address** | **K. Gangappa Gowda**<br>No. 96, "Taliru"' Ittamadu, 1st main 4th cross Banashankari 3rd stage 5th block Bengaluru 560085 |
| **Contact Number** | Mobile: **+91 98455 47653,** Res. No. : **080 26727283** |
| **Qualification** | B.Sc., LL.B. , M.A. , B.Ed and DIPLOMA in EDUCATIONAL PLANNING AND ADMINISTRATION held at National University of Educational Planning and Administration – New Delhi |
| **Present Engagement** | Serving as State Secretary, The Bharat Scouts and Guides Karnatakaka |

**Service Profile**

- After selection as probationary Government High School Head Master by KPSC during December 1978 served in te following various posts of the Dept of Public Instruction.
- Head Master of Govt High School
- Incharge Principal of Govt Jr. College.
- Assistant Educational Officer of a Taluk
- Senior Asst. Director ( Establishment) at office of the Commissioner for Public Instruction
- Deputy Director of Public Instruction
- Joint Director of Public Instruction AND
- Director of Public Instruction ( Public Education)
- Served as State Level Primary and Secondary School Teachers Recruitment Authority as Special Officer of the Centralized Admission Cell (CAC) Dept of Public Instruction

**After Retirement :** Served as **State Education Advisor** in Karnataka Residential Educational Institutions Society **( KREIS)**, a social dept organization – for 7 years and helped in permanently oppointing 5325 Principals, Teaching and Non Teaching Staffs to 460 Morarji Desai and Kittur Rani Chennamma Residential Schools

**Rewards and Recognition**

**"MAN OF THE YEAR 1985 AWARD"**
by NGO Patrike "Daarideepa" periapattana, Mysuru Dist.

**"BRAVAERY AWARD in 1987"**
awarded by GOVT OF KARNATAKA for facing the ROBERERS

**Bengaluru Division Best DDPI (Administration)** award during 2001-2002 awarded by the State Dept of Public Instruction.

**"GURUKULA AWARD", BENGALURU RATNA AWARD, THNGEYA SUPUTRA AWARD, KENGERI HANUMANTAYYA AWARD**, etc by Prestigious NGO's

**"Chintana Chilume K Gangappa Gowda"** has been published by Abhinandana Samithi Bengaluru. etc.,

# ಪ್ರಕೃತಿ ಅಧ್ಯಯನ ಮತ್ತು ಚಾರಣ ಶಿಬಿರ



ಅಕ್ಟೋಬರ್ 6 ರಂದು ರೋವರ್ಸ್-ರೇಂಜರ್ಸ್‌ಗಳಿಗೆ ಕಲಬುರಗಿ ವಿಭಾಗಮಟ್ಟದ ಪ್ರಕೃತಿ ಅಧ್ಯಯನ ಮತ್ತು ಚಾರಣ ಶಿಬಿರವನ್ನು ಖಾಸಾಮಠ, ಗುರುಮಠಕಲ್, ಯಾದಗಿರಿ ಜಿಲ್ಲೆ ಇಲ್ಲಿ ಏರ್ಪಡಿಸಲಾಗಿತ್ತು. ಪೂಜ್ಯ ಶ್ರೀಶ್ರೀಶ್ರೀ ಶಾಂತವೀರ ಮುರುಘಾ ಶರಣರು ಖಾಸಾಮಠ, ಗುರುಮಠಕಲ್ ಇವರು ಶಿಬಿರವನ್ನು ಉದ್ಘಾಟಿಸಿದರು.

ಜಿಲ್ಲಾ ಪದಾಧಿಕಾರಿಗಳಾದ ಶ್ರೀಮತಿ ನಾಗರತ್ನ ಅನಾಪೂರ, ಶ್ರೀ ರಾಘವೇಂದ್ರ, ಶ್ರೀಮತಿ ನಾಗರತ್ನ ಪಾಟೀಲ್, ಹಾಗೂ ಇತರರು ಸಮಾರಂಭದಲ್ಲಿ ಹಾಜರಿದ್ದರು. ಶಿಬಿರದಲ್ಲಿ ಒಟ್ಟು 124 ರೋವರ್ಸ್ ಹಾಗೂ 77 ರೇಂಜರ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ರೋವರ್ ವಿಭಾಗಕ್ಕೆ ಶ್ರೀ ಟಿ.ಎಸ್. ಶಿವಣ್ಣ, ರೇಂಜರ್ ವಿಭಾಗಕ್ಕೆ ಶ್ರೀಮತಿ ಶಶಿರೇಖಾ ಅವರುಗಳು ಕಾರ್ಯನಿರ್ವಹಿಸಿದರು. ಸಹಾಯಕರಾಗಿ ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ಸಂತೋಷ್ ಹುಗ್ಗಿ, ಶ್ರೀ ಈರಣ್ಣ ಶ್ರೀ ಹೂಮಯ್ಯ, ಶ್ರೀ ಮಲ್ಲಿಕಾರ್ಜುನ ಬಳೆ, ಶ್ರೀ ಬಸರೆಡ್ಡಿ, ಗೈಡ್ ಕ್ಯಾಪ್ಟನ್ಸ್ ಶ್ರೀಮತಿ ಮೀನಾಕ್ಷಿ ರಾಠೋಡ, ಶ್ರೀಮತಿ ರುದ್ರಮ್ಮ ಕಾರ್ಯನಿರ್ವಹಿಸಿದರು.

# ಬೆಂಗಳೂರು ವಿಭಾಗೀಯ ಮಟ್ಟದ ಪ್ರೇರಣಾ ಶಿಬಿರ

ಅಕ್ಟೋಬರ್ 24 ರಿಂದ 26 ರ ವರೆಗೆ ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕಿನ ಮುದಿಗೆರೆ ಕ್ರಾಸ್‌ನಲ್ಲಿರುವ ಆರ್.ಎಂ. ಇಂಟರ್ ನ್ಯಾಷನಲ್ ಶಾಲಾ ಆವರಣದಲ್ಲಿ ಬೆಂಗಳೂರು ವಿಭಾಗೀಯ ಮಟ್ಟದ ಪ್ರೇರಣಾ ಶಿಬಿರವನ್ನು ರೇಂಜರ್ಸ್‌ಗಳಿಗಾಗಿ ಆಯೋಜನೆ ಮಾಡಲಾಗಿತ್ತು. ಶಿಬಿರದ ನಾಯಕಿಯಾಗಿ ಶ್ರೀಮತಿ ಕೆ.ಆರ್. ಮಂಜುಳ ಕಾರ್ಯನಿರ್ವಹಿಸಿದರು. ರಾಜ್ಯ ಸಹಾಯಕ ಆಯುಕ್ತರಾದ ಶ್ರೀಮತಿ ಬಿ.ಡಿ. ಶಾಂತಾ ರವರು ನೋಡಲ್ ಅಧಿಕಾರಿಯಾಗಿ, ಕಾರ್ಯನಿರ್ವಹಿಸಿದರು. ಈ ಶಿಬಿರದಲ್ಲಿ ಸ್ತ್ರೀ ಸಂವೇದನೆ, ಮಹಿಳೆ ಮತ್ತು ಮತದಾನ, ಸ್ತ್ರೀಶಕ್ತಿ ಸಂಘಗಳ ಮಹತ್ವ, ಹದಿಹರೆಯದ ಶಿಕ್ಷಣ, ಮಹಿಳಾ ಕಾನೂನು, ಮಹಿಳಾ ಸಹಾಯವಾಣಿಗಳು, ಉದ್ಯೋಗಸ್ಥ ಮಹಿಳೆಯ ಸವಾಲುಗಳು, ಮಹಿಳಾ ಸಾಧಕರ ಪರಿಚಯ, ಗುಂಪುಚರ್ಚೆ, ಭಾಷಣ, ರಸಪ್ರಶ್ನೆ, ಸಂವಾದ, ಆಟಗಳು ಸಾಧಕರಿಗೆ ಸನ್ಮಾನ ಕಾರ್ಯಕ್ರಮಗಳನ್ನು ಆಯೋಜಿಸಲಾಗಿತ್ತು. ಕೋಲಾರ ಜಿಲ್ಲಾ ರಕ್ಷಣಾಧಿಕಾರಿಯಾದ ಶ್ರೀಮತಿ ರೋಹಿಣಿ ಕಟೋಚ್ ಸಪೇಟ್ ರವರು ಶಿಬಿರವನ್ನು ಉದ್ಘಾಟಿಸಿದರು. ಮುಳಬಾಗಿಲು ತಾಲ್ಲೂಕು ಪಂಚಾಯತ್ ಅಧ್ಯಕ್ಷರಾದ ಶ್ರೀ ನೀಲಕಂಠೇಗೌಡ, ಆರ್.ಎಂ. ಶಾಲೆಯ ಕಾರ್ಯದರ್ಶಿ ಶ್ರೀ ರಾಘವೇಂದ್ರ, ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಸಪ್ಪಗೌಡ, ಜಿಲ್ಲಾ ಆಯುಕ್ತ ಶ್ರೀ ಕೆ.ಆರ್. ಸುರೇಶ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಭಾಸ್ಕರ್ ರೆಡ್ಡಿ, ರಾಜ್ಯ ಗೈಡ್ ಪ್ರತಿನಿಧಿ ಶ್ರೀಮತಿ ವಿ.ಎಂ. ಲತಾ, ರವರು ಉಪಸ್ಥಿತರಿದ್ದರು. ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಕೆ.ಆರ್. ಜಯಶ್ರೀ, ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಜುಲಿಯದ ಹೇಮಲತಾ, ಮಹಿಳಾ ಸಾಧಕಿಯರಾದ ಶ್ರೀಮತಿ ನಾಗಮ್ಮ ಮತ್ತು ಶ್ರೀಮತಿ ರಾಧಾಮಣಿರವರನ್ನು ಸನ್ಮಾನಿಸಲಾಯಿತು. ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.





# ಗಾಂಧಿ ಜಯಂತಿ ಕಾರ್ಯಕ್ರಮ

ಅಕ್ಟೋಬರ್ 2 ರಂದು ಬೆಂಗಳೂರು ದಕ್ಷಿಣ ಮತ್ತು ಉತ್ತರ ಜಿಲ್ಲಾ ಸಂಸ್ಥೆಯ ವತಿಯಿಂದ ಗಾಂಧಿ ಜಯಂತಿ ಅಂಗವಾಗಿ ನಗರದ ಕಬ್ಬನ್ ಉದ್ಯಾನವನದಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು. ಈ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀಮತಿ ಸಾಲುಮರದ ತಿಮ್ಮಕ್ಕ, ಶ್ರೀ ಜರಗನಹಳ್ಳಿ ಶಿವಶಂಕರ್, ಚುಟುಕು ಸಾಹಿತಿಗಳು ಹಾಗೂ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಭಾಗವಹಿಸಿ ಗಾಂಧಿತತ್ತ್ವಗಳ ಬಗ್ಗೆ ಮಾತನಾಡಿದರು. ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಮತ್ತು ಬೆಂಗಳೂರು ಗ್ರಾ. ದಕ್ಷಿಣ ಹಾಗೂ ಉತ್ತರ ಜಿಲ್ಲೆಗಳ ಪದಾಧಿಕಾರಿಗಳು ಹಾಜರಿದ್ದರು.





## ವಿಭಾಗೀಯ ಮಟ್ಟದ ಶಿಕ್ಷಣಾಧಿಕಾರಿಗಳ ಸಮಾವೇಶ – ಬೆಂಗಳೂರು ವಿಭಾಗ

ನವೆಂಬರ್ 17 ರಂದು ಬೆಂಗಳೂರು ವಿಭಾಗೀಯ ಮಟ್ಟದ ಶಿಕ್ಷಣಾಧಿಕಾರಿಗಳು ಒಂದು ದಿನದ ಸಮಾವೇಶವನ್ನು ಕೊಂಡಜ್ಜಿ ಬಸಪ್ಪ ಸಭಾಂಗಣ, ಶಾಂತಿಗೃಹ, ರಾಜ್ಯಕೇಂದ್ರ ಕಛೇರಿ ಭಾರತ್ ಸ್ಕೌಟ್ಸ್–ಗೈಡ್ಸ್‌ನಲ್ಲಿ ಆಯೋಜಿಸಲಾಗಿತ್ತು.

ಸದರಿ ಸಮಾವೇಶಕ್ಕೆ ಬೆಂಗಳೂರು ಉತ್ತರ, ದಕ್ಷಿಣ, ಗ್ರಾಮಾಂತರ, ಪೂರ್ವ, ಮಹಾನಗರ ಪಾಲಿಕೆ ಜಿಲ್ಲೆ, ಕೋಲಾರ, ತುಮಕೂರು, ಮಧುಗಿರಿ, ಜಿಲ್ಲೆಗಳಿಂದ ಉಪನಿರ್ದೇಶಕರು ಕ್ಷೇತ್ರ ಶಿಕ್ಷಣಾಧಿಕಾರಿಗಳು ಡನಾಟ್ ಪ್ರಾಂಶುಪಾಲರು, ನೋಡಲ್ ಅಧಿಕಾರಿಗಳು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಸೇರಿ ಒಟ್ಟು 80 ಜನ ಪ್ರತಿನಿಧಿಗಳು ಭಾಗವಹಿಸಿದ್ದರು. ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಗಂಗಪ್ಪ ಗೌಡರು, ಎಲ್ಲಾ ಅಧಿಕಾರಿಗಳ ಜವಾಬ್ದಾರಿ ಮತ್ತು ಸರ್ಕಾರದ ಬೆಂಬಲದ ಬಗ್ಗೆ ಜವಾಬ್ದಾರಿಗಳ ವಿಷಯದ ಕುರಿತು ವಿವರಿಸಿದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಎಲ್ಲ ಅಧಿಕಾರಿಗಳು ಸ್ಕೌಟ್ಸ್–ಗೈಡ್ಸ್ ಸಂಸ್ಥೆಯ ಕಾರ್ಯಕ್ರಮದಲ್ಲಿ ಸಹಕರಿಸಬೇಕು ಎಂದು ತಿಳಿಸಿದರು. ಅಧಿಕಾರಿಗಳಿಂದ ಕಾರ್ಯಕ್ರಮದ ಯಶಸ್ವಿಗೆ ಹಾಗೂ ಸಂಸ್ಥೆಯೊಂದಿಗೆ ಕೈಜೋಡಿಸುವ ಆಕಾಂಕ್ಷೆಯನ್ನು ಅಭಿವ್ಯಕ್ತಪಡಿಸಿದರು. ಈ ವಿಭಾಗೀಯ ಮಟ್ಟದ ಕಾರ್ಯಕ್ರಮವನ್ನು ಬೆಂಗಳೂರು ಉತ್ತ ಮತ್ತು ದಕ್ಷಿಣ ಜಿಲ್ಲಾ ವತಿಯಿಂದ ಆಯೋಜಿಸಲಾಯಿತು.



# ವಿಭಾಗೀಯ ಮಟ್ಟದ ವಿದ್ಯಾ ಇಲಾಖೆಯ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಪದಾಧಿಕಾರಿಗಳ ಮಾಹಿತಿ ಶಿಬಿರ

ನವೆಂಬರ್ 15 ರಂದು ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಸ್ಕೌಟ್ ಭವನದಲ್ಲಿ 7 ಜಿಲ್ಲೆಗಳ (ಶಿವಮೊಗ್ಗ, ದಾವಣಗೆರೆ, ಚಿತ್ರದುರ್ಗ, ಮಂಗಳೂರು, ಉಡುಪಿ, ಚಿಕ್ಕಮಗಳೂರು ಮತ್ತು ಶಿರಸಿ) ವಿಧ್ಯಾ ಇಲಾಖೆಯ ಹಾಗೂ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಪದಾಧಿಕಾರಿಗಳ ಮಾಹಿತಿ ಶಿಬಿರಕ್ಕೆ ಜಿಲ್ಲೆಯ 5 ಉಪನಿರ್ದೇಶಕರುಗಳು (ಆಡಳಿತ), 5 ಡಯಟ್ ಪ್ರಾಂಶುಪಾಲರು, 16 ಕ್ಷೇತ್ರ ಶಿಕ್ಷಣಾಧಿಕಾರಿಗಳು, 16 ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕರು, 34 ನೋಡಲ್ ಅಧಿಕಾರಿಗಳು, 6 ಜಿಲ್ಲಾ ಮುಖ್ಯ ಆಯುಕ್ತರುಗಳು, 22 ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

ಶಿವಮೊಗ್ಗ ಜಿಲ್ಲಾ ಸಂಸ್ಥೆಯ ಅಧ್ಯಕ್ಷರು ಹಾಗೂ ಜಿಲ್ಲಾಧಿಕಾರಿಯವರಾದ ಮಾನ್ಯ ಶ್ರೀ ಕೆ. ದಯಾನಂದ, ಭಾ.ಆ.ಸೇ, ರವರು ಶಿವಮೊಗ್ಗ ಜಿಲ್ಲಾ ಮಟ್ಟದ ಸಂಸ್ಥಾಪನಾ ದಿನಾಚರಣೆಯ ಧ್ವಜ ಚೀಟಿ ಬಿಡುಗಡೆ ಮಾಡಿ ವಿದ್ಯಾ ಇಲಾಖೆಯ ಮತ್ತು ಸ್ಕೌಟ್ಸ್-ಗೈಡ್ಸ್ ಪದಾಧಿಕಾರಿಗಳ ಮಾಹಿತಿ ಶಿಬಿರದ ಉದ್ಘಾಟನೆಯನ್ನು ಮಾಡಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸೇವಾ ಮನೋಭಾವನೆಯನ್ನು ಬೆಳೆಸುವ ಚಳುವಳಿಯಾಗಿದೆ ಹಾಗಾಗಿ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್‌ನ್ನು ಅನೌಪಚಾರಿಕ ಶಿಕ್ಷಣ ಎಂದು ನಿರ್ಲಕ್ಷಿಸಬಾರದು ಎಂದು ತಿಳಿಸಿ ಮಾತನಾಡಿದರು.

ಮಾಹಿತಿ ಶಿಬಿರದ ಮುಖ್ಯ ಅತಿಥಿಯಾಗಿ ಆಗಮಿಸಿದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಮಾತನಾಡಿ ಮುಂದಿನ ವರ್ಷದಿಂದ ಎಲ್ಲಾ ಪದವಿ ಪೂರ್ವ, ಪದವಿ ಮತ್ತು ವಿವಿ ಮಟ್ಟದಲ್ಲಿ ಸ್ಕೌಟ್ಸ್-ಗೈಡ್ಸ್ ಘಟಕ ಸ್ಥಾಪಿಸುವಂತೆ ಶೀಘ್ರ ಆದೇಶ ಹೊರಡಿಸುವ ಸಾಧ್ಯತೆ ಇದೆ ಎಂದು ಅಭಿಪ್ರಾಯ ಪಟ್ಟರು. ಸ್ಕೌಟ್ ಸಂಸ್ಥಾಪನಾ ದಿನಾಚರಣೆ ಬಗ್ಗೆ ಮಾತನಾಡಿ ಸ್ವಾತಂತ್ರ್ಯ ಪೂರ್ವದಲ್ಲಿ ಇದ್ದಂತಹ ಸ್ಕೌಟ್ಸ್-ಗೈಡ್ಸ್ ಸಂಘಟನೆಗಳು 1050 ನವೆಂಬರ್ 7 ರಂದು ಏಕೀಕರಣಗೊಂಡು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ರೂಪುಗೊಂಡಿತು. 1951 ಆಗಸ್ಟ್ 15 ರಂದು ದಿ ಗರ್ಲ್‌ಗೈಡ್ ಅಸೋಸಿಯೇಷನ್ ಸಹ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ ವಿಲೀನಗೊಂಡು ಒಂದು ಏಕಿಕೃತ ಸಂಸ್ಥೆ ರೂಪುಗೊಂಡಿತು ಎಂದು ಹೇಳಿದರು. ಅತಿಥಿಯಾಗಿ ಬಂದಂತಹ ರಾಜ್ಯ ಕಾರ್ಯದರ್ಶಿಯವರಾದ ಮಾನ್ಯ ಶ್ರೀ ಕೆ. ಗಂಗಪ್ಪಗೌಡ ರವರು ಸ್ಕೌಟಿಂಗ್ ಮೂಲ ತತ್ವದ ಬಗ್ಗೆ ತಿಳಿಸಿ ಅದರೊಂದಿಗೆ ಸ್ಕೌಟ್-ಗೈಡ್ ಚಳುವಳಿಯನ್ನು ಹೆಚ್ಚಿನ ಮಟ್ಟದಲ್ಲಿ ಬೆಳೆಸಲು ಸಾರ್ವಜನಿಕ ಶಿಕ್ಷಣ ಇಲಾಖೆಯು ಯಾವ ರೀತಿಯಲ್ಲಿ ಸಹಕರಿಸಬಹುದೆಂದು ಮಾಹಿತಿಯನ್ನು ನೀಡಿದರು.

ನಂತರದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಸಂಬಂಧದ ಬಗ್ಗೆ ಬಂದಂತಹ ಉಪ-ನಿರ್ದೇಶಕರುಗಳು, ಡಯಟ್ ಪ್ರಾಂಶುಪಾಲರುಗಳು, ಕ್ಷೇತ್ರ ಶಿಕ್ಷಣಾಧಿಕಾರಿಗಳು, ನೋಡಲ್ ಅಧಿಕಾರಿಗಳು ಹಾಗೂ ಜಿಲ್ಲಾ ಮುಖ್ಯ ಆಯುಕ್ತರುಗಳು ಮಾತನಾಡಿದರು. ಕೊನೆಯದಾಗಿ ಜಿಲ್ಲಾ ಮುಖ್ಯ ಆಯುಕ್ತರಾದ ಮಾನ್ಯ ಶ್ರೀ ಹೆಚ್.ಡಿ. ರಮೇಶಶಾಸ್ತ್ರಿ ರವರು ಅಧ್ಯಕ್ಷೀಯ ನುಡಿಯನ್ನು ನುಡಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್ ಸ್ವಾಗತಿಸಿ ಪ್ರಾಸ್ತಾವಿಕ ಮಾತನಾಡಿದರು. ವಂದನಾರ್ಪಣೆಯನ್ನು ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಶಕುಂತಲಾ ಚಂದ್ರಶೇಖರ್ ನಿರ್ವಹಿಸಿದರು. ಎ.ಎಸ್.ಓ.ಸಿ. ಶ್ರೀಮತಿ ಭಾರತಿ ಡಾಯಸ್ ರವರು ನಿರೂಪಿಸಿದರು. ಸಮಾರಂಭದಲ್ಲಿ ಬಿ.ಜಿ.ಎಂ.ಪಿ. ಸಂಯೋಜಕರಾದ ಶ್ರೀ ಎಂ.ಎ. ಚೆಲ್ಲಯ್ಯ, ಜಿಲ್ಲಾ ಉಪಾಧ್ಯಕ್ಷರು ಹಾಗೂ ಉಪ-ನಿರ್ದೇಶಕರಾದ ಶ್ರೀಮತಿ ಪಿ. ಸುಮಂಗಳಾ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಉಮೇಶಶಾಸ್ತ್ರಿ, ಖಜಾಂಚಿ ಶ್ರೀ ಚೂಡಾಮಣಿ ಪವಾರ್ ರಾಜ್ಯ ಸಂಘಟನಾ ಆಯುಕ್ತರು(ಸ್ಕೌ) ಶ್ರೀ ಪ್ರಭಾಕರ ಭಟ್ ಉಪಸ್ಥಿತರಿದ್ದರು.





# ಸ್ಕೌಟ್ಸ್ ಮತ್ತು ಗೈಡ್ಸ್
## ರಾಜ್ಯ ಮಟ್ಟದ ಪೂರ್ವಭಾವಿ ರಾಷ್ಟ್ರಪತಿ ಪದಕ ತರಬೇತಿ ಶಿಬಿರ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ದಿನಾಂಕ 13 ರಿಂದ 17 ನವೆಂಬರ್ 2018ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಶಿಬಿರ ಮತ್ತು ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ರಾಜ್ಯ ಮಟ್ಟದ ಪೂರ್ವಭಾವಿ ರಾಷ್ಟ್ರಪತಿ ಪದಕ ತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ಸದರಿ ಶಿಬಿರದಲ್ಲಿ 16 ಜಿಲ್ಲೆಗಳಿಂದ 280 ಸ್ಕೌಟ್ಸ್ ಮತ್ತು 212 ಗೈಡ್ಸ್‌ಗಳು 80 ಸ್ಕೌಟರ್ಸ್ ಮತ್ತು ಗೈಡರ್ಸ್ ಹಾಗು ಸಿಬ್ಬಂದಿ ಭಾಗವಹಿಸಿದ್ದರು.

ನವೆಂಬರ್ 14 ರಂದು ದಿವಂಗತ ಕೊಂಡಜ್ಜಿ ಬಸಪ್ಪನವರ ಪುಣ್ಯಸ್ಮರಣೆ ಮತ್ತು ಮಕ್ಕಳ ದಿನಾಚರಣೆಯನ್ನು ಆಚರಿಸಲಾಯಿತು. ಈ ಸಂದರ್ಭದಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಏರ್ಪಡಿಸಲಾಗಿತ್ತು. ವಿವಿಧ ಧರ್ಮಗ್ರಂಥಗಳ ಪಠಣ ಮಾಡಲಾಯಿತು. ಶ್ರೀ. ಶರಣಪ್ಪ ವಿ. ಹಲಸಿ, ಉಪಕುಲಪತಿಗಳು, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ ಇವರು ಶಿಬಿರವನ್ನು ಉದ್ಘಾಟಿಸಿ ಸ್ಕೌಟಿಂಗ್ ಚಳವಳಿಯನ್ನು ಪ್ರೋತ್ಸಾಹಿಸಿ ಹಿತನುಡಿದರು. ಅಲ್ಲದೆ ತಾವು ಕೂಡ ವಿಧ್ಯಾರ್ಥಿಯಾಗಿದ್ದಾಗ ಸ್ಕೌಟ್ ಕ್ಯಾಂಪಿನಲ್ಲಿ ಭಾಗವಹಿಸಿದ್ದನ್ನು ನೆನಪಿಸಿಕೊಂಡರು-ಸಂಸ್ಥೆಯ ಬೆಳವಣಿಗೆಗೆ ಸಹಕಾರ ನೀಡುವುದಾಗಿ ಭರವಸೆ ಇತ್ತರು.

ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಮಾತನಾಡಿ ದಿ. ಕೊಂಡಜ್ಜಿ ಬಸಪ್ಪನವರ ಗುಣಗಾನ, ಸಾಧನೆ, ಸ್ಕೌಟಿಂಗ್ ಸೇವೆ ಇವುಗಳನ್ನು ಮಕ್ಕಳಿಗೆ ತಿಳಿಸಿದರು ಹಾಗೂ ಕೊಂಡಜ್ಜಿ ಶಿಬಿರದ ಅಭಿವೃದ್ಧಿಗೆ ಕೈಗೊಂಡಿರುವ ಪ್ರಗತಿಯನ್ನು ತಿಳಿಸಿ ವಿವಿಧ ಮತ ಧರ್ಮಗಳ ಸಾರ ಮಾನವ ಧರ್ಮದ ಬಗ್ಗೆ ಅತ್ಯಂತ ಅರ್ಥಪೂರ್ಣವಾಗಿ ಮಾತನಾಡಿದರು. ಶ್ರೀಮತಿ ವಿಶಾಲಾಕ್ಷಮ್ಮ, ಅಧ್ಯಕ್ಷರು, ಗ್ರಾಮಪಂಚಾಯ್ತಿ ಕೊಂಡಜ್ಜಿ ಇವರು ಕಾರ್ಯಕ್ರಮಕ್ಕೆ ಶುಭ ಹಾರೈಸಿದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ಮಾತನಾಡಿ ಸ್ಕೌಟಿಂಗ್ ಚಳವಳಿಗೆ ಹಿರಿಯರುಗಳು ಸಲ್ಲಿಸಿದ ಸೇವೆಯನ್ನು ಸ್ಮರಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರ ನೇತೃತ್ವದಲ್ಲಿ ರಾಜ್ಯದಲ್ಲಿ ಆಗಿರುವ ಪ್ರಗತಿ ಹಾಗೂ ಸಾಧನೆ ಬಗ್ಗೆ ಸುಧೀರ್ಘವಾಗಿ ಎಲ್ಲರ ಗಮನ ಸೆಳೆದರು. ಶ್ರೀಮತಿ ಸಾವಿತ್ರಮ್ಮ, ಎ.ಎಲ್.ಟಿ(ಗೈ) ಶ್ರೀ. ಬಿ.ಡಿ. ಫರ್ನಾಂಡೀಸ್, ಎಲ್.ಟಿ(ಸ್ಕೌ) ಇವರುಗಳು ಶಿಬಿರದ ನಾಯಕರಾಗಿದ್ದರು. ಶ್ರೀಮತಿ ಬಿ.ಡಿ. ಶಾಂತ, ಎಲ್.ಟಿ(ಗೈ) ಇವರು ತಾಂತ್ರಿಕ ಸಲಹೆಯನ್ನು ನೀಡಿದರು.

ಡಾ.ಎಂ.ಜಿ. ರಾಜಶೇಖರಪ್ಪ, ನಿವೃತ್ತ ಪ್ರಾಂಶುಪಾಲರು, ಜೆ.ಜೆ.ಎಂ. ಮೆಡಿಕಲ್ ಕಾಲೇಜು, ದಾವಣಗೆರೆ, ಕೊಂಡಜ್ಜಿ ಗ್ರಾಮಸ್ಥರು, ಮರುಳ ಸಿದ್ಧೇಶ್ವರ ಭಜನಾ ಮಂಡಳಿ ಕೊಂಡಜ್ಜಿ ಇವರು ವಚನಗಳು, ದಾಸರಪದಗಳು ಹಾಗೂ ಇತರೆ ಭಕ್ತಿಗೀತೆಗಳನ್ನು ಭಜನೆ ಮೂಲಕ ಹಾಡಿ ಸದ್ಭಾವನಾ ಸೇವಯನ್ನು ಸಲ್ಲಿಸಿದರು. ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಎ.ಪಿ. ಷಡಾಕ್ಷರಪ್ಪ ದಾವಣಗೆರೆ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಕೆ.ಜೆ. ಶರಣಪ್ಪ, ಶ್ರೀ ಎಂ.ಎ. ಚಲ್ಲಯ್ಯ, ಕೊಂಡಜ್ಜಿ ಬಸಪ್ಪ ಕುಟುಂಬದವರಾದ ಡಾ॥ ಕೆ.ಬಿ. ಗುರುಮೂರ್ತಿ, ಶ್ರೀ ಕೆ.ಬಿ. ವಿಜಯಕುಮಾರ್, ಶ್ರೀ ರವಿಕುಮಾರ್ ಇವರುಗಳು ಭಾಗವಹಿಸಿದ್ದರು. ಶ್ರೀ ಎಂ. ಪ್ರಭಾಕರ್ ಭಟ್, ಎಸ್.ಓ.ಸಿ(ಸ್ಕೌಟ್ಸ್), ಶ್ರೀಮತಿ ಮಂಜುಳ. ಸಿ, ಎಸ್.ಓ.ಸಿ (ಗೈ) ಇವರುಗಳು ಶಿಬಿರದ ಉಸ್ತುವಾರಿ ವಹಿಸಿ ಶಿಬಿರವನ್ನು ಯಶಸ್ವಿಗೊಳಿಸಿದರು.



# ರಾಜ್ಯಮಟ್ಟದ ಹಿಮಾಲಯ ವೃಕ್ಷಮಣಿ, ಮೂಲ ತರಬೇತಿ ಹಾಗೂ ಪ್ರೀ–ಎ.ಎಲ್.ಟಿ. ತರಬೇತಿ ಶಿಬಿರಗಳು

ನವೆಂಬರ್ 14 ರಿಂದ 20 ರ ವರೆಗೆ ಡಾ. ಅನಿಬೆಸೆಂಟ್ ಸ್ಕೌಟ್ಸ್–ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಮೂಲ ತರಬೇತಿ, ಹಿಮಾಲಯ ವೃಕ್ಷಮಣಿ ಹಾಗೂ ಪ್ರೀ–ಎಲ್.ಟಿ. ತರಬೇತಿ ಶಿಬಿರಗಳನ್ನು ಹಮ್ಮಿಕೊಳ್ಳಲಾಗಿತ್ತು.

## ಸ್ಕೌಟ್ ವಿಭಾಗ

| ಕ್ರ. ಸಂಖ್ಯೆ | ತರಬೇತಿ ಶಿಬಿರ | ನಾಯಕ/ನಾಯಕಿಯರು | ಅಭ್ಯರ್ಥಿಗಳ ಸಂಖ್ಯೆ |
|---|---|---|---|
| 1) | ಸ್ಕೌಟ್ ಮಾಸ್ಟರ್‌ಗಳ ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರ–1 | ಶ್ರೀ ಕೆ.ಜಿ. ಗೋಪಾಲ ಕೃಷ್ಣ, ಎಲ್.ಟಿ.(ಸ್ಕೌ) | 22 |
| 2) | ಸ್ಕೌಟ್ ಮಾಸ್ಟರ್‌ಗಳ ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರ–2 | ಡಾ. ಭರಶೆಟ್ಟಿ, ಎಲ್.ಟಿ.(ಸ್ಕೌ) | 24 |
| 3) | ಕಬ್ ಮಾಸ್ಟರ್‌ಗಳ ಮೂಲ ತರಬೇತಿ ತರಬೇತಿ ಶಿಬಿರ | ಶ್ರೀಮತಿ ರವಿಕಲಾ ಎಲ್.ಟಿ. (ಕಬ್) | 15 |







ಶ್ರೀ ಶಾಂತಾರಾಮ್ ಪ್ರಭು, ಎ.ಎಲ್.ಟಿ.(ಎಸ್.) ಶ್ರೀ ಬಾಬುರಾವ್ ನಿಂಬೂರೆ, ಎ.ಎಲ್.ಟಿ.(ಎಸ್), ಶ್ರೀ ಎಸ್.ಆರ್. ಪಾಟೀಲ ಎ.ಎಲ್.ಟಿ., (ಸ್ಕೌ), ಶ್ರೀ ಮಹಮದ್ ತುಂಬೆ ಎ.ಎಲ್.ಟಿ.(ಎಸ್), ಶ್ರೀ ಅಮರೇಶಕೋರಿ ಎ.ಎಲ್.ಟಿ.(ಎಸ್.) ಶ್ರೀಮತಿ ಕುಸುಮ, ಪ್ರೀ–ಎ.ಎಲ್.ಟಿ.(ಕ) ಶ್ರೀ ರವೀಂದ್ರ, ಶ್ರೀ ಮಹೇಶ್, ಶ್ರೀ ಸ್ವಾಮಿ ಇವರುಗಳು ಸಹಾಯಕರಾಗಿ ಸೇವೆ ಸಲ್ಲಿಸಿದರು.

## ಗೈಡ್ ವಿಭಾಗ

| ಕ್ರ. ಸಂಖ್ಯೆ | ತರಬೇತಿ ಶಿಬಿರ | ನಾಯಕಿಯರು | ಅಭ್ಯರ್ಥಿಗಳ ಸಂಖ್ಯೆ |
|---|---|---|---|
| 1) | ಗೈಡ್ ಶಿಕ್ಷಕಿಯರ ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರ-1 | ಶ್ರೀಮತಿ ಅರುಣಮಾಲ, ಎಲ್.ಟಿ. (ಗೈ) | 32 |
| 2) | ಗೈಡ್ ಶಿಕ್ಷಕಿಯರ ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರ-2 | ಶ್ರೀಮತಿ ಶಾಮಲ ಕೆ.ವಿ., ಎಲ್.ಟಿ. (ಗೈ) | 23 |
| 3) | ಫ್ಲಾಕ್ ಲೀಡರ್ಸ್ ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರ | ಶ್ರೀಮತಿ ವಿಮಲಬಾಯಿ, | 11 |
| 4) | ಪ್ರೀ-ಎ.ಎಲ್.ಟಿ. ತರಬೇತಿ ಶಿಬಿರ | ಶ್ರೀಮತಿ ಸುಮನ್ ಲತಾ ಅರೋರ ಎಲ್.ಟಿ. (ರೇಂಜರ್) | 52 |

ಶ್ರೀಮತಿಯರಾದ ಶುಭ ವಿಶ್ವನಾಥ್, ಬಿ. ಕಾಮೇಶ್ವರಿ, ಎಲ್.ಎಸ್. ಬಹದ್ದೂರಿ, ಮೈಥಿಲಿರಾವ್, ವನಜಾಕ್ಷಿ, ಕೆ.ಪಿ. ಕಾತ್ಯಾಯಿಣಿ, ಜಯಂತಿ ಸೋನ್ಸ್, ಗೈಡ್ ವಿಭಾಗಕ್ಕೆ ಹಾಗೂ ಶ್ರೀ ಲೊರಿನಾ ಕಂತಿನಾ, ಮತ್ತು ತರಬೇತಿಗೆ ಶ್ರೀಮತಿಯರಾದ ಗೀತಾ ನಟರಾಜ್ ಎಲ್.ಟಿ.(ಗೈ), ಶಕುಂತಲಾ ಸಿ. ಗರವಾತೆ, ಎ.ಎಲ್.ಟಿ(ಬಿ) ಬಿ.ವಿ. ರಾಮಲತ, ಎ.ಎಲ್.ಟಿ.(ಆರ್), ಕೃತಿ ಚಾಂದ್‌ವಾಣ, ಫ್ರೀ-ಎ.ಎಲ್.ಟಿ. ಹಾಗೂ ಆರ್.ಓ.ಸಿ.(ಎಸ್) ಇವರುಗಳು ಸಹಾಯಕರಾಗಿ ಕಾರ್ಯ ನಿರ್ವಹಿಸಿದರು.

ನವೆಂಬರ್ 19 ರಂದು ನಡೆದ ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರು, ಶ್ರೀ ಎಂ.ಎ. ಚಲ್ಲಯ್ಯ ನೋಡಲ್ ಅಧಿಕಾರಿ ಬಿ.ಬಿ.ಎಂ.ಪಿ. ಭಾಗವಹಿಸಿದ್ದರು. ನವೆಂಬರ್ 20 ರಂದು ಸರ್ವಧರ್ಮ ಪ್ರಾರ್ಥನೆ ಸಲ್ಲಿಸಲಾಯಿತು.



~~~: ಸೂಚನೆ :~~~

**ಸಾರ್ವಜನಿಕ ಶಿಕ್ಷಣ ಇಲಾಖೆಯ ಶಿಕ್ಷಣಾಧಿಕಾರಿಗಳಿಗೆ ಸ್ಕೌಟ್-ಗೈಡ್ ಮಾಹಿತಿ ಶಿಬಿರವನ್ನು ಕೆಳಕಂಡ ಸ್ಥಳ ಹಾಗೂ ದಿನಾಂಕಗಳಂದು ಏರ್ಪಡಿಸಲಾಗಿದೆ.**

**ಕಲಬುರಗಿ ವಿಭಾಗ**

ದಿನಾಂಕ: 03 ಡಿಸೆಂಬರ್ 2018

ಸ್ಥಳ: ಅಪ್ಪ ಪಬ್ಲಿಕ್ ಸ್ಕೂಲ್, ಎಸ್.ಬಿ. ಟೆಂಪಲ್ ರಸ್ತೆ, ಕಲಬುರಗಿ

**ಬೆಳಗಾವಿ ವಿಭಾಗ**

ದಿನಾಂಕ: 06 ಡಿಸೆಂಬರ್ 2018

ಸ್ಥಳ: ಜೈನ್ ಹೆರಿಟೇಜ್ ಸ್ಕೂಲ್, ರೈಲ್ವೆ ಸ್ಟೇಷನ್ ರಸ್ತೆ, ಬೆಳಗಾವಿ
~~~

## ಸ್ನೇಹಜೀವಿ ಚೈತನ್ಯ ಶೀಲ ಸ್ಫೂರ್ತಿದಾಯಕ ನಾಯಕ

# ಶ್ರೀ ಹೆಚ್.ಎನ್. ಅನಂತಕುಮಾರ್

**(22 ಜುಲೈ 1959 – 12 ನವೆಂಬರ್ 2018)**

1996 ರಿಂದ ಸತತವಾಗಿ ಆರು ಮಹಾಚುನಾವಣೆಗಳಲ್ಲಿ ವಿಜಯಿಯಾಗಿ ಬೆಂಗಳೂರು ದಕ್ಷಿಣ ಲೋಕಸಭಾ ಕ್ಷೇತ್ರವನ್ನು ಸಂಸತ್ತಿನಲ್ಲಿ ಪ್ರತಿನಿಧಿಸುತ್ತಿದ್ದ ಕ್ರಿಯಾಶೀಲ ನಾಯಕ ಸನ್ಮಾನ್ಯ ಶ್ರೀ ಹೆಚ್.ಎನ್. ಅನಂತ್ ಕುಮಾರ್ ಅವರ ಅಕಾಲಿಕ ಮರಣವು ಭಾರತದ, ವಿಶೇಷವಾಗಿ ಕರ್ನಾಟಕದ ಸಾರ್ವಜನಿಕ ಬದುಕಿಗೆ ಅಪಾರವಾದ ನಷ್ಟವನ್ನುಂಟುಮಾಡಿದೆ. ಶ್ವಾಸಕೋಶದ ಕ್ಯಾನ್ಸರಿನಿಂದ ಕಳೆದ ಆರು ತಿಂಗಳಿಂದ ಬಳಲುತ್ತಿದ್ದ ಶ್ರೀ ಅನಂತ ಕುಮಾರ್ ಅವರು ದಿನಾಂಕ 12 ನವೆಂಬರ್ 2018ರಂದು ಬೆಂಗಳೂರಿನಲ್ಲಿ ಕೊನೆಯುಸಿರೆಳೆದರು.



ತಮ್ಮ ಪ್ರತಿ ನಡೆ–ನುಡಿಯಲ್ಲಿ ಸಮಾಜದ ಅಭಿವೃದ್ಧಿಯ ಕನಸುಗಳನ್ನು ಹೊತ್ತು ಅವುಗಳನ್ನು ಸಾಕ್ಷ್ಯಾತ್ಕಾರ ಮಾಡಿಕೊಳ್ಳುವುದರತ್ತ ಬಿಡುವಿರದ ಚಟುವಟಿಕೆಯಲ್ಲಿ ಶ್ರೀ ಅನಂತ ಕುಮಾರ್ ಸಾರ್ವಜನಿಕ ಬದುಕಿಗೆ ಬಂದಾಗಿನಿಂದ ತೊಡಗಿಕೊಂಡಿದ್ದರು. 1998 ರಿಂದ 2001 ವರೆಗೆ, ನಂತರ ಮೇ 2014 ರಿಂದ ತಮ್ಮ ಕೊನೆಯ ದಿನದ ತನಕ ಅವರು ಕೇಂದ್ರ ಸರ್ಕಾರದಲ್ಲಿ ಕ್ಯಾಬಿನೆಟ್ ದರ್ಜೆಯ ಸಚಿವರಾಗಿ ದೇಶಕ್ಕೆ ಸೇವೆಯನ್ನು ಸಲ್ಲಿಸಿದರು. ನಾಗರೀಕ ವಿಮಾನಯಾನ, ಪ್ರವಾಸೋದ್ಯಮ, ರಾಸಾಯನಿಕ ಮತ್ತು ರಸಗೊಬ್ಬರ ಹಾಗೂ ಸಂಸದೀಯ ವ್ಯವಹಾರಗಳ ಮಂತ್ರಿಗಳಾಗಿ ಅತ್ಯಂತ ದಕ್ಷತೆಯಿಂದ ಅವರು ಕಾರ್ಯನಿರ್ವಹಿಸಿದ್ದರು.

ರಸಗೊಬ್ಬರ ಶಾಖೆಯ ಸಚಿವರಾಗಿದ್ದಾಗ, ಶೇ.100 ರಷ್ಟು ಕಡ್ಡಾಯವಾಗಿ ಬೇವನ್ನು ಸವರಿದ ಯೂರಿಯಾ ಉತ್ಪಾದನೆಯ ಮೂಲಕ ದೇಶಕ್ಕೆ ವರ್ಷಕ್ಕೆ ಕನಿಷ್ಠ ರೂ.10 ಸಾವಿರ ಕೋಟಿಯನ್ನು ಉಳಿತಾಯ ಮಾಡಲು ಕಾರಣರಾಗಿದ್ದರು. ಫೆಬ್ರವರಿ 2016ರಲ್ಲಿ ಹೃದಯದ ತೊಂದರೆಗಳಿಗೆ ಅಳವಡಿಸುವ ಲೋಹಕ ಸ್ಟೆಂಟ್‌ಗಳ ಬೆಲೆಯನ್ನು ರೂ.1.5 ಲಕ್ಷದಿಂದ ರೂ.28 ಸಾವಿರಗಳಿಗೆ ಇಳಿಸಿ ಸಾಮಾನ್ಯ ಜನರ ಆರೋಗ್ಯ ಪರಿಸ್ಥಿತಿಯು ಸುಧಾರಿಸುವಂತೆ ನೋಡಿಕೊಂಡರು. ಆರೋಗ್ಯದ ವಿಚಾರದಲ್ಲಿ ಅಪಾರ ಕಾಳಜಿಯನ್ನು ಹೊಂದಿದ್ದ ಶ್ರೀ ಅನಂತ ಕುಮಾರ್ ಅವರು ಕೃತಕ ಮಂಡಿ ಕೀಲು ದರವನ್ನು ಸುಮಾರು ರೂ. 1.5 ಲಕ್ಷ ಹಾಗೂ 2.5 ಲಕ್ಷದಿಂದ ರೂ. 55 ಸಾವಿರಕ್ಕೆ ಇಳಿಸಿ ಸಾಮಾನ್ಯ ಜನರಿಗೆ ಅನುಕೂಲವನ್ನು ಮಾಡಿಕೊಟ್ಟರು. ಸುಮಾರು 5000 ಜನೌಷಧಿ ಕೇಂದ್ರಗಳನ್ನು ದೇಶದಾದ್ಯಂತ ಸ್ಥಾಪಿಸಿ ಆಲೋಪತಿ ಔಷಧಗಳು ಶೇ. 50 ರಿಂದ 90 ರಷ್ಟು ಕಡಿಮೆ ದರದಲ್ಲಿ ಜನರಿಗೆ ದೊರಕುವಂತೆ ಮಾಡಿದ್ದು ಒಂದು ದೊಡ್ಡ ಸಾಧನೆಯೇ ಸರಿ. ಈಗ ಭಾರತವು ರಸಗೊಬ್ಬರವನ್ನು ಆಮದು ಮಾಡಿಕೊಳ್ಳುತ್ತಿದೆ. 2022ರ ವೇಳೆಗೆ ನಾವು ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸುವುದರ ಜೊತೆಗೆ ರಫ್ತು ಮಾಡಲು ಸಾಧ್ಯವಾಗುವ ಯೋಜನೆಯನ್ನು ರೂಪಿಸಿದ್ದರು. ಅದಕ್ಕಾಗಿ ಸದ್ಯಕ್ಕೆ ಮುಚ್ಚಿರುವ ಆರು ರಸಗೊಬ್ಬರ ಕಾರ್ಖಾನೆಗಳನ್ನು ರೂ. 48 ಸಾವಿರಕೋಟಿ ಬಂಡವಾಳದಲ್ಲಿ ಪುನರುಜ್ಜೀವನಗೊಳಿಸಲು ಯೋಜನೆಯನ್ನು ರೂಪಿಸಿದ್ದಾರೆ.




ಸಂಸದೀಯ ವ್ಯವಹಾರಗಳ ಸಚಿವರಾಗಿ ಅತ್ಯಂತ ಚಾಣಾಕ್ಷತನದಿಂದ ಆಡಳಿತ ಮತ್ತು ವಿರೋಧ ಪಕ್ಷಗಳ

ನಡುವೆ ಸಮನ್ವಯವನ್ನು ಸಾಧಿಸಿ, ಸಂಸತ್ತು ದಾಖಲೆಯ ಮಟ್ಟದಲ್ಲಿ ಉತ್ಪಾದಕ ಕೆಲಸ ಮಾಡುವಂತೆ ಮಾಡಿದ್ದರು. ಅವರ ಕಾಲದಲ್ಲಿ ಸರಕು ಮತ್ತು ಸೇವಾ ತೆರಿಗೆಯ ಅಧಿನಿಯಮಗಳನ್ನು ಸಂಸತ್ತು ಅಂಗೀಕರಿಸಿತು.

ಕನ್ನಡ ಭಾಷೆಯ ಮೇಲೆ ಸಂಪೂರ್ಣ ಹಿಡಿತವನ್ನು ಹೊಂದಿದ್ದ ಶ್ರೀ ಅನಂತ ಕುಮಾರ್ ಕನ್ನಡ, ಇಂಗ್ಲೀಷ್ ಮತ್ತು ಹಿಂದಿ ಭಾಷೆಗಳಲ್ಲಿ ಉತ್ತಮ ವಾಗ್ಮಿಯಾಗಿದ್ದರು. 15 ಅಕ್ಟೋಬರ್ 2012 ರಂದು ವಿಶ್ವಸಂಸ್ಥೆಯಲ್ಲಿ ಕನ್ನಡದಲ್ಲಿ ಭಾಷಣವನ್ನು ಆರಂಭಿಸಿ ತಮ್ಮ ಕನ್ನಡ ಪ್ರೇಮವನ್ನು ಮೆರೆದರು. ಹಲವಾರು ಅಂತರರಾಷ್ಟ್ರೀಯ ಒಡಂಬಡಿಕೆಗಳಿಗೆ ಕನ್ನಡದಲ್ಲಿಯೇ ಸಹಿ ಮಾಡಿರುವುದು ಇವರ ಹೆಗ್ಗಳಿಕೆಯಾಗಿದೆ.

22 ಜುಲೈ 1959ರಲ್ಲಿ ಬೆಂಗಳೂರಿನಲ್ಲಿ ಶ್ರೀ ಹೆಚ್.ಎನ್. ನಾರಾಯಣ ಶಾಸ್ತ್ರಿ ಮತ್ತು ಶ್ರೀಮತಿ ಗಿರಿಜಾ ಶಾಸ್ತ್ರಿರವರ ಪುತ್ರರಾಗಿ ಜನಿಸಿ, ತಮ್ಮ ವಿದ್ಯಾಭ್ಯಾಸವನ್ನು ಹುಬ್ಬಳ್ಳಿಯಲ್ಲಿ ನಡೆಸಿದ ಶ್ರೀ ಅನಂತ ಕುಮಾರ್ ಅವರು ಶಾಲಾ-ಕಾಲೇಜಿನ ದಿನಗಳಿಂದಲೂ ಅತ್ಯಂತ ಚಟುವಟಿಕೆಯ ವ್ಯಕ್ತಿಯಾಗಿದ್ದರು. 1996 ರಲ್ಲಿ ಬೆಂಗಳೂರು ದಕ್ಷಿಣ ಕ್ಷೇತ್ರದಿಂದ 11ನೆಯ ಲೋಕಸಭೆಗೆ ಆಯ್ಕೆಯಾದರು. ನಂತರದ ಆರು ಚುನಾವಣೆಗಳಲ್ಲಿ ಅವರು ಗೆಲುವನ್ನೇ ಸಾಧಿಸಿದರು.



ಸಾಮಾಜಿಕ ಸೇವಾ ಚಟುವಟಿಕೆಗಳಿಗಾಗಿ "ಅದಮ್ಯ ಚೇತನ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅದರ ಮೂಲಕ ಶಾಲಾ ಮಕ್ಕಳಿಗಾಗಿ "ಅನ್ನಪೂರ್ಣ", ಮಧ್ಯಾನದ ಬಿಸಿ ಊಟದ ಕಾರ್ಯಕ್ರಮ, ಅನೌಪಚಾರಿಕ ಶಿಕ್ಷಣ ಆಟ-ಪಾಠ, ಆರೋಗ್ಯ ಚೇತನ, ಗ್ರಾಮೀಣಾಭಿವೃದ್ಧಿ, ಚಿಣ್ಣರ ಚೇತನ, ಶೂನ್ಯ ತ್ಯಾಜ್ಯ ಉಪಕ್ರಮ, ರಕ್ತದಾನ ಮುಂತಾದ ಹತ್ತು-ಹಲವಾರು ಚಟುವಟಿಕೆಗಳನ್ನು ಹಮ್ಮಿಕೊಂಡು ಸಾಮಾಜಿವಾಗಿ ಅತ್ಯಂತ ಉಪಯುಕ್ತ ವ್ಯಕ್ತಿಯಾಗಿದ್ದರು. ಸಸ್ಯಾಗ್ರಹವೆಂಬ ವಿನೂತನ ಕಾರ್ಯಕ್ರಮವನ್ನು ಆಯೋಜಿಸಿ ಹಸಿರನ್ನು ಹೆಚ್ಚಿಸುವ ಕಾರ್ಯಕ್ರಮದಲ್ಲಿ ತೊಡಗಿಕೊಂಡಿದ್ದರು.



ಕೇಂದ್ರ ಸರ್ಕಾರದೊಡನೆ ಕರ್ನಾಟಕದ ಯಶಸ್ವಿ ಸಂಪರ್ಕದ ಕೊಂಡಿಯಾಗಿ 22 ವರ್ಷಗಳ ಕಾಲ ಶ್ರಮಿಸಿದ ಶ್ರೀ ಅನಂತ ಕುಮಾರ್ ಅವರು ಕರ್ನಾಟಕದ ಅಭಿವೃದ್ಧಿಗೆ ತಮ್ಮದೇ ಆದ ವಿಶಿಷ್ಠ ಕಾಣಿಕೆಯನ್ನು ನೀಡಿದ್ದಾರೆ. ಶ್ರೀಮತಿ ತೇಜಸ್ವಿನಿ ಅನಂತ ಕುಮಾರ್ ಅವರು ನಮ್ಮ ರಾಜ್ಯ ಸಂಸ್ಥೆಯ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀ ಅನಂತ ಕುಮಾರ್ ಅವರೊಡನೆ ಜೊತೆ-ಜೊತೆಯಾಗಿ ಶ್ರೀಮತಿ ತೇಜಸ್ವಿನಿ ಅನಂತ ಕುಮಾರ್ ಅವರು ಸಾಮಾಜಿಕ ಚಟುವಟಿಕೆಗಳಲ್ಲಿ ಮಗ್ನರಾಗಿದ್ದಾರೆ. ಶ್ರೀಮತಿ ತೇಜಸ್ವಿನಿ ಮತ್ತು ಅವರ ಇಬ್ಬರು ಹೆಣ್ಣು ಮಕ್ಕಳು ಮತ್ತು ಕುಟುಂಬ ವರ್ಗದವರಿಗೆ ಆಗಿರುವ ಅಪಾರ ನಷ್ಟ ಮತ್ತು ದುಃಖವನ್ನು ಭರಿಸುವ ಶಕ್ತಿಯನ್ನು ಭಗವಂತನು ನೀಡಲೆಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ ಪರವಾಗಿ ನಾವು ಪ್ರಾರ್ಥಿಸುತ್ತೇವೆ.



ನಾವೆಲ್ಲರೂ ಶ್ರೀ ಅನಂತ ಕುಮಾರ್ ಅವರು ತೋರಿಸಿರುವ ಸಾಮಾಜಿಕ ಕ್ರಿಯಾಶೀಲತೆಯ ಹಾದಿಯಲ್ಲಿ ತೊಡಗಿಕೊಳ್ಳೋಣ.

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**









ವಿದ್ಯುತ್ ಕೊರತೆ ನೀಗಿಸಲು ಮತ್ತು ವಿದ್ಯುತ್ ಸ್ವಾವಲಂಬಿಗಳಾಗಲು

ಸೌರಶಕ್ತಿ ಚಾಲಿತ ನೀರಾವರಿ ಪಂಪು ಸೆಟ್ಟುಗಳನ್ನು ಬಳಸಿ

# ಸೋಲಾರ್ ಪಂಪ್‌ಸೆಟ್











ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ

(ಕರ್ನಾಟಕ ಸರ್ಕಾರದ ಅಧೀನಕ್ಕೆ ಒಳಪಟ್ಟಿದೆ)

website: www.kredlinfo.in

ಕೆ.ಆರ್.ಇ.ಡಿ.ಎಲ್.

# ಜಿಲ್ಲಾ ವಾರ್ತೆಗಳು

## ಬೆಂಗಳೂರು ದಕ್ಷಿಣ

ಬೆಂಗಳೂರು ದಕ್ಷಿಣ ಕನ್ನಡ ಜಿಲ್ಲೆ ವಿಲ್ಸನ್ ಗಾರ್ಡನ್ ಸ್ಥಳೀಯ ಸಂಸ್ಥೆಯ ಇಂಡಿಯನ್ ಪ್ರೈಮರಿಮತ್ತು ಹೈಸ್ಕೂಲ್ ಸ್ಕೌಟ್ಸ್-ಗೈಡ್‌ಗಳು ದೇವರ ಚಿಕ್ಕನಳ್ಳಿಯಲ್ಲಿರುವ ಆರ್.ಎಂ.ಆರ್. ಪಾರ್ಕ್ ನಲ್ಲಿ ಪ್ರತಿ ಮಂಗಳವಾರ ಸ್ವಚ್ಛತೆಯ ಕಾರ್ಯಕ್ರಮವನ್ನು ಹಮ್ಮಿಕೊಂಡು ಸಾರ್ವಜನಿಕರೊಂದಿಗೆ ಸೇರಿ ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಸ್ಕೌಟ್ ಮಾಸ್ಟರ್ ಶ್ರೀ ಪಾರ್ಥಸಾರಥಿ ಹಾಗೂ ಗೈಡ್ ಕ್ಯಾಪ್ಟನ್ ಶ್ರೀಮತಿ ರೂಪ ದೇವರಾಜ್ ರವರು ನೇತೃತ್ವ ವಹಿಸಿ ಕಾರ್ಯಕ್ರಮವನ್ನು ಪ್ರತಿ ಮಂಗಳವಾರ ನಡೆಸಿಕೊಂಡು ಬರುತ್ತಿದ್ದಾರೆ.



* Scouts & Guides of Auden Public School, Girinagar participated in a Cycle Rally from Auden Public School to Ramanjayana Gudda, Hanumantha Nagar and participated in Swacha Barath Campaign in the premises on 17-11-2018.




Unit Leaders and the principal of the Auden Institution participated

* 19 Scouts, 18 Guides of Dnyan Prabodhan Mandari Air Scout and Air Guide Unit, Belgavi District had theirAnnual Camp at HAL premises from 24th to 26 th October under the leadership of Sri George Rodiges and Ashwini Chikkaballapur. The Rover scouts of HAL had made all arrangements for their stay at HAL premises. Sri P. Nandakumar, Rover Scout Leader of HAL Rover Crew co-ordinated the programme. Smt. Uma Boopathi, Secretary, Ladies Club Inaugurated the camp. Smt. Bharathi Chakravathi, Secretary, whitefield Local Association and Sri Chakravathi visited the camp.



## ಬೆಂಗಳೂರು ಗ್ರಾಮಾಂತರ

ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ ವತಿಯಿಂದ ದೇವನಹಳ್ಳಿ ಅರಣ್ಯ ಇಲಾಖೆ ಆವರಣದಲ್ಲಿರುವ ವೃಕ್ಷೋದ್ಯಾನದಲ್ಲಿ ರೋವರ್ಸ್-ರೇಂಜರ್ಸ್‌ಗಳಿಗಾಗಿ 5 ದಿನಗಳ ವಿಭಾಗ ಮಟ್ಟದ ಪ್ರಕೃತಿ ಅಧ್ಯಯನ ಮತ್ತು ಚಾರಣ ಶಿಬಿರವನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ರವರು ಸಸಿಗೆ ನೀರೆರೆಯುವ ಮೂಲಕ ಉದ್ಘಾಟಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಬಿ.ಕೆ. ಶಿವಪ್ಪ, ಉಪಾಧ್ಯಕ್ಷೆ ಶ್ರೀಮತಿ ರಾಜಮ್ಮ ಗುಲಾಬ್ ಜಾನ್ ಮತ್ತಿತರರು ಹಾಜರಿದ್ದರು.



ಈ ಸಂದರ್ಭದಲ್ಲಿ ರಾಜ್ಯ ಸಹ ಕಾರ್ಯದರ್ಶಿ ಶ್ರೀ ಲೋಕೇಶ್, ರಾಜ್ಯ ಸಂಘಟನಾ ಆಯುಕ್ತರಾದ ಶ್ರೀಮತಿ ಮಂಜುಳಾ, ಶ್ರೀ ಪ್ರಭಾಕರ್ ಭಟ್, ರಾಜ್ಯ ತರಬೇತಿ ಆಯುಕ್ತರಾದ ಶ್ರೀಮತಿ ಶಾಮಲಾ, ಶ್ರೀ ಶಂಕರ್, ಬೆಂಗಳೂರು ಉತ್ತರ ಜಿಲ್ಲೆ ಕಾರ್ಯದರ್ಶಿ ಶ್ರೀ ಸತೀಶ್, ಶ್ರೀಮತಿ ಸರೋಜ, ಶಿಬಿರದ ನಾಯಕರಾದ ಶ್ರೀ ನರೇಂದ್ರ ಕುಮಾರ್, ಶ್ರೀಮತಿ ರಾಮಲತಾ, ವಲಯ ಅರಣ್ಯಾಧಿಕಾರಿ ಪುಟ್ಟರಾಜು, ಜಿಲ್ಲಾ ಉಪಾಧ್ಯಕ್ಷೆ ಶ್ರೀಮತಿ ರಾಜಮ್ಮ, ಜಿಲ್ಲಾ ಆಯುಕ್ತರಾದ ಶ್ರೀ ನಾಗರಾಜ್, ಶ್ರೀಮತಿ ವಿಜಯಕುಮಾರಿ, ಖಜಾಂಚಿ ಶ್ರೀ ಎಸ್.ಸಿ. ಗೋಪಾಲಸ್ವಾಮಿ, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಸಂಕರ್ ಕಾಂಬ್ಳಿ, ಕುಮಾರಿ ಲಕ್ಷ್ಮೀದೇವಿ, ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಬೇಬಿನಾಯಕ್, ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀಮತಿ ವತ್ಸಲಾ, ಶ್ರೀಮತಿ ಗೀತಾ, ಲಯನ್ಸ್ ಅಧ್ಯಕ್ಷ ಶ್ರೀ ನಾಗರಾಜಯ್ಯ, ಜಿಲ್ಲಾ ಸಮುದಾಯ ಅಭಿವೃದ್ಧಿ ಸಮಿತಿ ಅಧ್ಯಕ್ಷ ಲಯನ್ ಶ್ರೀ ವಿಜಯಕುಮಾರ್, ತಾಲ್ಲೂಕು ಅಧ್ಯಕ್ಷ ಮತ್ತು ಎಸ್.ಎಲ್.ಎನ್. ಶಾಲೆಯ ಸಂಸ್ಥಾಪಕ ಕಾರ್ಯದರ್ಶಿ ಶ್ರೀ ಡಿ.ಎಸ್. ಧನಂಜಯ, ಕಾರ್ಯದರ್ಶಿ ಶ್ರೀ ಸೀತಾರಾಮು, ಮಾನಸ ಆಸ್ಪತ್ರೆ ವೈಧ್ಯ ಶ್ರೀ ನರಸಾರೆಡ್ಡಿ ಮತ್ತಿತರರು ಹಾಜರಿದ್ದರು.

## Bengaluru North

The Shivajinagar Local Association Conducted Basic Course for Flock Leaders, Guide Captians & Scout Masters at Holy Angels' Higher Primary School, Frazer Town, Bengaluru from 05-10-2018 to 11-10-2018.

| Sl. No. | Course | Leaders | No. of Participants |
|---|---|---|---|
| 1. | Flock Leaders | Smt. B. Revathy, L.T. (B) | 10 |
| 2. | Guide Captain | Miss Krupa Vijai ALT (G) | 11 |
| 3. | Scout Master | Mr. Prakash ALT (S) | 09 |

Sri T.S. Lucas LT(S), Smt. B.D. Shantha, LT(G), Smt. Susheela Chengappa, LT(G) were the resource persons.





## ಬೆಳಗಾವಿ

ಸೆಪ್ಟೆಂಬರ್ 28 ರಿಂದ ಅಕ್ಟೋಬರ್ 4 ರ ವರೆಗೆ ಸರಕಾರಿ ಮರಾಠಿ ಹಿರಿಯ ಪ್ರಾಥಮಿಕ ಶಾಲೆ, ಕಡೋಲಿ ಇಲ್ಲಿ ಬೆಳಗಾವಿ ಗ್ರಾಮೀಣ ವಲಯದ ಸ್ಥಳೀಯ ಸಂಸ್ಥೆ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದ ಸಂಯುಕ್ತ ಆಶ್ರಯದಲ್ಲಿ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರವು ಜರುಗಿತು.

ಸೆಪ್ಟೆಂಬರ್ 28 ರಂದು ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರಾದ ಶ್ರೀ ಅರುಣ ಕಟಾಂಬಳೆ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜಿ.ಬಿ. ಮನ್ನಿಕೇರಿ ಇವರುಗಳು ಸಸಿಗೆ ನೀರು ಹಾಕುವುದರ ಮೂಲಕ ಶಿಬಿರವನ್ನು ಉದ್ಘಾಟಿಸಿದರು. ಜಿಲ್ಲಾ ಆಯುಕ್ತರು (ಸ್ಕೌಟ್) ಶ್ರೀ ಎಂ.ಎನ್. ದಂಡಿನ, ಜಿಲ್ಲಾ ಗೈಡ್ ಆಯುಕ್ತರು ಶ್ರೀಮತಿ ಪಿ.ಬಿ. ಪಾಟೀಲ, ಶಾಲೆಯ ಪ್ರಧಾನ ಗುರುಗಳಾಧ ಶ್ರೀ ಆರ್.ಎಂ. ಪಾಟೀಲ, ಕನ್ನಡ ಶಾಲೆಯ ಪ್ರಧಾನ ಗುರುಗಳು ಶ್ರೀಮತಿ ಕೆ.ಎಫ್. ಛಾವಿಹಾಳ, ಗ್ರಾಮ ಪಂಚಾಯತ್ ಸದಸ್ಯರುಗಳು, ಶಾಲೆಯ ಸಿಬ್ಬಂದಿ ವರ್ಗದವರು, ಶಿಬಿರದ ನಾಯಕರುಗಳು ಉಪಸ್ಥಿತರಿದ್ದರು. ಶ್ರೀ ದಾದಾಸಾಬ್ ಅತ್ತಾರ್, ಎ.ಎಸ್.ಓ.ಸಿ. (ಸ್ಕೌಟ್) ಸ್ವಾಗತಿಸಿದರು. ಶ್ರೀಮತಿ ಎಸ್.ಎಲ್. ಬಂದಕ್ಕನವರ ವಂದಿಸಿದರು

ಇದೇ ಸಂದರ್ಭದಲ್ಲಿ ಅಕ್ಟೋಬರ್ 2 ರಂದು ಗಾಂಧಿ ಜಯಂತಿ ನಿಮಿತ್ತ ಎಲ್ಲ ಶಿಬಿರಾರ್ಥಿಗಳೊಂದಿಗೆ ಸರ್ವಧರ್ಮ ಪ್ರಾರ್ಥನೆ ಹಾಗೂ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ಕೊನೆಯ ದಿನ ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು. ಸಮಾರೋಪ ಸಮಾರಂಭದ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಜಿ.ಬಿ. ಮನ್ನಿಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಲೀಲಾವತಿ ಎಸ್. ಹಿರೇಮಠ ಇವರು ಉಪಸ್ಥಿತರಿದ್ದರು.

ಜಿಲ್ಲಾ ಮುಖ್ಯ ಆಯುಕ್ತರು ಮಾತನಾಡುತ್ತಾ ತರಬೇತಿಯಲ್ಲಿ ಭಾಗವಹಿಸಿದ ಎಲ್ಲ ಶಿಬಿರಾರ್ಥಿಗಳು ನವೆಂಬರ್ 1ನೇ ದಿನಾಂಕಕ್ಕೆ ಘಟಕಗಳನ್ನು ಪ್ರಾರಂಭಿಸಿ ಪೋಟೋ ಸಮೇತ ವರದಿಯನ್ನು ಕಛೇರಿಗೆ ಸಲ್ಲಿಸುವಂತೆ ತಿಳಿಸಿದರು. ಸದರಿ ಶಿಬಿರದಲ್ಲಿ ಸ್ಕೌಟ್ ವಿಭಾಗದ ನಾಯಕರಾಗಿ ಶ್ರೀ ಬಾಬುರಾವ್ ನಿಂಬೂರೆ, ಗೈಡ್ ವಿಭಾಗದ ನಾಯಕಿಯಾಗಿ ಶ್ರೀಮತಿ ಎಲ್.ಎಸ್. ಬಹದ್ದೂರಿ ಕಾರ್ಯನಿರ್ವಹಿಸಿದರು. ಸ್ಕೌಟ್ ಮಾಸ್ಟರ್ಸ್ ಶಿಬಿರದಲ್ಲಿ 3, ಗೈಡ್ ಕ್ಯಾಪ್ಟನ್ ಶಿಬಿರದಲ್ಲಿ 31, ಶಿಬಿರಾರ್ಥಿಗಳು ಭಾಗವಹಿಸಿದ್ದರು.

* ಅಕ್ಟೋಬರ್ 2 ರಂದು ಗಾಂಧಿ ಜಯಂತಿ ನಿಮಿತ್ತ ಸ್ಕೌಟ್ ಭವನದಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು. ನಂತರ ಸ್ಕೌಟ್ ಭವನದ ಆವರಣದಲ್ಲಿ ಕೆ.ಎಲ್.ಪಿ.ಎಸ್. ಶಾಲೆಯ ಮಕ್ಕಳೊಂದಿಗೆ ಶ್ರಮದಾನ ಕಾರ್ಯವನ್ನು ಮಾಡಲಾಯಿತು. ಗಾಂಧೀಜಿಯವರ ಜೀವನದ ಬಗ್ಗೆ ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ ಇವರು ಮಾತನಾಡಿದರು.

* ಅಕ್ಟೋಬರ್ 20 ರಿಂದ 30 ರ ವರೆಗೆ ನಡೆಯುವ ಇಂಡೋಚೀನಾ ಭ್ರಾತೃತ್ವ ಶಿಬಿರಕ್ಕೆ ಆಯ್ಕೆಯಾದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜಿ.ಬಿ. ಮನ್ನಿಕೇರಿ, ಪ್ರೊ. ವಿ.ಆರ್. ದೇವರಡ್ಡಿ ಇವರುಗಳಿಗೆ ಅಕ್ಟೋಬರ್ 17 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಸತ್ಕಾರ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಸಮಾರಂಭದಲ್ಲಿ ಜಿಲ್ಲೆಯ ಎಲ್ಲಾ



ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಸ್ಕೌಟರ್, ಗೈಡರ್‌ಗಳು ಸೇರಿ ಒಟ್ಟು 45 ಜನರು ಭಾಗವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ ಸ್ವಾಗತಿಸಿದರು. ಶ್ರೀ ಬಿ.ಜಿ. ಜನಕಟ್ಟಿ ವಂದಿಸಿದರು.



* investiture ceremony was held at KLE School Gokak on 29 October. Sri P.Y. Patil, Scout Master, Sri D.B. Attar, ASOC, Miss Lakshmi Mangi, Smt. Anupa Kowshik, Principal were present.

## ಚಿಕ್ಕಮಗಳೂರು

ಅಕ್ಟೋಬರ್ 2 ರಂದು ರಾಷ್ಟ್ರಪತಿ ಪೂರ್ವ ತಯಾರಿಯಲ್ಲಿರುವ ಸ್ಕೌಟ್ಸ್-ಗೈಡ್ಸ್‌ಗಳು ವಸುಧಾ ಆಸ್ಪತ್ರೆಯಲ್ಲಿ ಹೊರ ರೋಗಿಗಳ ಹಾಗೂ ಒಳ ರೋಗಿಗಳ ರಕ್ತ ತಪಾಸಣೆ, ಬಿ.ಪಿ. ತಪಾಸಣೆ ಚಿಕಿತ್ಸೆಗಳ ಬಗ್ಗೆ ಮಾಹಿತಿಯನ್ನು ಪಡೆದರು. 10 ಸ್ಕೌಟ್‌ಗಳು, 20 ಗೈಡ್‌ಗಳು ಭಾಗವಹಿಸಿದ್ದರು. ಗೈಡ್ ಕ್ಯಾಪ್ಟನ್ ಶ್ರೀಮತಿ ಪ್ರತೀಮಾ ಹೆಚ್.ಡಬ್ಲ್ಯೂ.ಬಿ.(ಜಿ.) ಶ್ರೀ ಮಲ್ಲೇಶಪ್ಪ ಕೆ.ಟಿ. ಜಿಲ್ಲಾ ಸಂಘಟಕರು, ಶ್ರೀ ಬಿ.ಎನ್. ಕಿರಣಕುಮಾರ್ ಭಾಗವಹಿಸಿದರು.

* ಅಕ್ಟೋಬರ್ 2 ರಂದು ಎಸ್.ಟಿ.ಜೆ. ಪದವಿ ಕಾಲೇಜಿನ ರೇಂಜರ್ಸ್‌ಗಳು ಚಿಕ್ಕಮಗಳೂರು ಆಶಾಕಿರಣ ಅಂಧ ಮಕ್ಕಳ ವಸತಿಯುತ ಶಾಲೆ, ಕೆಂಪನಹಳ್ಳಿ ಚಿಕ್ಕಮಗಳೂರು ಇಲ್ಲಿನ ಮಕ್ಕಳಿಗೆ ವಿವಿದ ಆಟಗಳನ್ನು ಆಡಿಸಿದರು. ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಭಾರತಿ. ಆರ್.ಎಲ್, ಕುಮಾರಿ ಬಿಂದು, ಜಿಲ್ಲಾ ಸಂಘಟಕರಾದ ಶ್ರೀ ಮಲ್ಲೇಶಪ್ಪ ಕೆ.ಟಿ. ಎ.ಎಲ್.ಟಿ. (ಎಸ್.) ಶ್ರೀ ಕಿರಣ್ ಕುಮಾರ್ ಬಿ.ಎಸ್, ಪ್ರೀ-ಎ.ಎಲ್.ಟಿ. ಮತ್ತು ಶಾಲೆಯ ಮುಖ್ಯೋಪಾಧ್ಯಯರಾದ ಶ್ರೀ ಬಿ.ಜಿ. ಚಂದ್ರಶೇಖರ್ ಇವರುಗಳು ಭಾಗವಹಿಸಿದ್ದರು.

* ಅಕ್ಟೋಬರ್ 25 ರಂದು ಜಿಲ್ಲಾ ಮಟ್ಟದ ವೃಕ್ಷಮಣಿಧಾರಕರ ಸಮಾವೇಶವನ್ನು ನಡೆಸಲಾಯಿತು. ಸಮಾವೇಶವನ್ನು ಉದ್ದೇಶಿಸಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿಯವರು ಮಾತನಾಡಿ, ಗಿಲ್‌ವೆಲ್ ಗ್ರೂಪ್‌ನ ಎಲ್ಲಾ ಸದಸ್ಯರು ಸ್ಕೌಟಿಂಗ್ ಮತ್ತು ಗೈಡಿಂಗ್‌ನಲ್ಲಿ ಪದವಿಯನ್ನು ಪಡೆದವರಾಗಿದ್ದೀರಿ, ಹಾಗಾಗಿ ಎಲ್ಲ ವೃಕ್ಷ ಮಣಿದಾರಕಸರು ಮೂಲ ಮತ್ತು ಮುಂದುವರೆದ ತರಬೇತಿ ಶಿಬಿರಗಳಲ್ಲಿ ಉತ್ತಮ ಸೇವೆ ಸಲ್ಲಿಸಿ ಸ್ಕೌಟಿಂಗ್ ಮತ್ತು ಗೈಡಿಂಗ್ ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ



ಮುಂದಿನ ಹಂತಕ್ಕೆ ವರ್ಗಾಯಿಸಬೇಕು ಹಾಗೂ ಇದರಿಂದ ಸಚ್ಛಾರಿತ್ರ, ಉತ್ಸಾಹಭರಿತ, ಉತ್ತಮ ನಾಯಕರನ್ನು ರಾಷ್ಟ್ರಕ್ಕೆ ನೀಡಲು ಸಾಧ್ಯ ಎಂದು ಕರೆ ನೀಡಿದರು.

ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಎನ್. ಮಹೇಶ್ ರವರು ಸಭೆಯನ್ನು ಉದ್ದೇಶಿಸಿ ಮಾತನಾಡಿ ರಾಜಕೀಯ ರಹಿತ, ಜಾತಿರಹಿತ, ಧರ್ಮರಹಿತ ಸ್ವಯಂ ಸೇವಾ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಎಲ್ಲರೂ ನೈತಿಕ, ದೈಹಿಕ, ನೀತಿಯುತ ಹಾಗೂ ಕೌಶಲ್ಯ ಶಿಕ್ಷಣವನ್ನು ನೀಡುವುದರ ಮೂಲಕ ತಾವು ಮೌಲ್ಯಗಳನ್ನು ಮುಂದಿನ ಹಂತಕ್ಕೆ ಜವಾಬ್ದಾರಿಯುತವಾಗಿ ವರ್ಗಾಯಿಸಬೇಕು ಎಂದು ಕರೆ ನೀಡಿದರು.

ವಿಶೇಷ ಆಹ್ವಾನಿತರಾಗಿ ಆಗಮಿಸಿದ್ದ ಶ್ರೀ ಮಲ್ಲಪ್ಪ, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು ಜಿಲ್ಲೆಯಲ್ಲಿ ನಡೆಯುವ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಎಲ್ಲಾ ಚಟುವಟಿಕೆಗಳಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ಸಂಪೂರ್ಣ ಸಹಕಾರ ನೀಡುವುದಾಗಿಯೂ ಹಾಗೂ ಶಾಲಾ ಸಂದರ್ಶನದ ಮೇಲೆ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಚಟುವಟಿಕೆಯ ಪ್ರಗತಿಯ ಬಗ್ಗೆ ಉಪನಿರ್ದೇಶಕರು ಸಾ.ಶಿ. ಇಲಾಖೆ ಮತ್ತು ಸ್ಕೌಟ್-ಗೈಡ್ ಜಿಲ್ಲಾ ಸಂಸ್ಥೆ ಕಾರ್ಯದರ್ಶಿ, ಇವರಿಗೆ ವರದಿ ನೀಡಿ ಸರ್ವತೋಮುಖ ಅಭಿವೃದ್ಧಿಗೆ ಸಹಕರಿಸುವುದಾಗಿ ತಿಳಿಸಿದರು. ಜಿಲ್ಲೆಯಾದ್ಯಂತ ಒಟ್ಟು ನಲವತ್ತು ವೃಕ್ಷಮಣಿದಾರಕರು ಭಾಗವಹಿಸಿದ್ದರು.

## ಚಿಕ್ಕಬಳ್ಳಾಪುರ

ಅಕ್ಟೋಬರ್ 2 ರಂದು ಚಿಕ್ಕಬಳ್ಳಾಪುರ ಜಿಲ್ಲಾಡಳಿತ, ಸಾರ್ವಜನಿಕ ಶಿಕ್ಷಣ ಇಲಾಖೆ, ಪ್ರವಾಸೋದ್ಯಮ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆಯ ಸಹಯೋಗ-ದೊಂದಿಗೆ ಗಾಂಧಿ ಜಯಂತಿಯನ್ನು ನಂದಿ ಬೆಟ್ಟದ ಕಾಲುದಾರಿ (ಮೆಟ್ಟಿಲು)ಯನ್ನು ಸ್ವಚ್ಛತೆ ಮಾಡುವ ಮೂಲಕ ಆಚರಿಸಲಾಯಿತು. ಕೃಷಿ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಶಿವಶಂಕರ್ ರೆಡ್ಡಿ ರವರು ಹಸಿರು ಬಾವುಟ ತೋರಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆಯನ್ನು ನೀಡಿದರು ಹಾಗೂ ತಾವೂ ಸಹ ಸ್ವಚ್ಛತಾ ಕಾರ್ಯದಲ್ಲಿ ಭಾಗಿಯಾದರು. ಈ ಸಂದರ್ಭದಲ್ಲಿ ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀ ಮಂಜುನಾಥ್. ಹೆಚ್.ವಿ, ಜಿಲ್ಲಾಧಿಕಾರಿಗಳಾದ ಶ್ರೀ ಅನಿರುದ್ ಶ್ರವಣ್, ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಗುರುದತ್ತ ಹೆಗಡೆ, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಕಾರ್ತಿಕ್ ರೆಡ್ಡಿ, ಜಿಲ್ಲಾ



ಯೋಜನಾಧಿಕಾರಿ ಶ್ರೀ ಭಾಸ್ಕರ್, ಶ್ರೀ ಶಿವಣ್ಣ ರೆಡ್ಡಿ, ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಕಾರ್ಯದರ್ಶಿ ಶ್ರೀ ಡಿ.ಎಸ್. ಮನೋಹರ್, ಶ್ರೀ ಶಿವಮೂರ್ತಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ (ಚಿಕ್ಕಬಳ್ಳಾಪುರ), ಶ್ರೀ ಸುಂದರ್ ರಾಜ್ ಖಜಾಂಚಿ ಸ್ಥಳೀಯ ಸಂಸ್ಥೆ(ಚಿಕ್ಕಬಳ್ಳಾಪುರ) ಉಪಸ್ಥಿತರಿದ್ದರು. ಜಿಲ್ಲೆಯ ಸೇಂಟ್ ಜೋಸೆಫ್ ಪ್ರೌಢ ಶಾಲೆಯ ಗೈಡ್ ಕ್ಯಾಪ್ಟನ್ ಹಾಗೂ ರೋವರ್ಸ್ – ರೇಂಜರ್ಸ್‌ಗಳು ಸ್ವಚ್ಛತಾ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

* ಅಕ್ಟೋಬರ್ 2 ರಂದು ಚಿಕ್ಕಬಳ್ಳಾಪುರ ಜಿಲ್ಲಾ ಸಂಸ್ಥೆ ಕೇಂದ್ರ ಕಛೇರಿಯಲ್ಲಿ ಗಾಂಧಿ ಜಯಂತಿಯನ್ನು ಆಚರಿಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಡಿ.ಎಸ್. ಮನೋಹರ್, ಶ್ರೀ ಶಿವಮೂರ್ತಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ (ಚಿಕ್ಕಬಳ್ಳಾಪುರ), ರೋವರ್ಸ್-ರೇಂಜರ್ಸ್‌ಗಳು ಭಾಗಿಯಾಗಿದ್ದರು.

* ಅಕ್ಟೋಬರ್ 4 ರಿಂದ 7 ರ ವರೆಗೆ ಘೋಷಗಿರಿ ಶ್ರೀ ಕೋದಂಡರಾಮ ಸಮುದಾಯ ಭವನ ಮಂಡಿಕಲ್ಲು ಚಿಕ್ಕಬಳ್ಳಾಪುರ ತಾಲ್ಲೂಕು ಇಲ್ಲಿ ನಿಪುಣ್ ಪರೀಕ್ಷಾ ಶಿಬಿರ ಮತ್ತು ಜಿಲ್ಲಾ ಮಟ್ಟದ ರೋವರ್-ರೇಂಜರ್ ಮೂಟ್ ಅನ್ನು ಜಿಲ್ಲಾ ಸಂಸ್ಥೆ ಆಯೋಜಿಸಿತ್ತು. ಈ ಶಿಬಿರದಲ್ಲಿ ರೋವರ್ ವಿಭಾಗಕ್ಕೆ ನಾಯಕರಾಗಿ ಶ್ರೀ ಬಾಲಸುಬ್ರಮಣ್ಯಂ ಮತ್ತು ಶ್ರೀ ಮುರಳಿ ಆನಂದ್, ರೇಂಜರ್ ವಿಭಾಗಕ್ಕೆ ನಾಯಕಿಯರಾಗಿ ಶ್ರೀಮತಿ ಪ್ರಮೀಳ ಹಾಗೂ ಶ್ರೀಮತಿ ವೀಣಾ ಕಾರ್ಯ ನಿರ್ವಸಿದರು. ಶಿಬಿರದ ಅಂತಿಮ ದಿನದಂದು ಶ್ರೀ ರಾಮಬಾಣ ಬೆಟ್ಟ ಮಂಡಿಕಲ್ಲು ಇಲ್ಲಿಗೆ ಚಾರಣವನ್ನು ಹಮ್ಮಿಕೊಳ್ಳಲಾಗಿತ್ತು.



* ಅಕ್ಟೋಬರ್ 17 ರಂದು ಶ್ರೀ ಶಿವಣ್ಣ ರೆಡ್ಡಿ ಉಪನಿರ್ದೇಶಕರು ಹಾಗೂ ಜಿಲ್ಲಾ ಮುಖ್ಯ ಆಯುಕ್ತರ ಮಾರ್ಗದರ್ಶನದಂತೆ ನೂತನ ಕಛೇರಿಯನ್ನು ಉದ್ಘಾಟಿಸಲಾಯಿತು. ಜಿಲ್ಲಾ ಕಾರ್ಯದರ್ಶಿ ಶ್ರೀ ಡಿ.ಎಸ್. ಮನೋಹರ್, ಶ್ರೀಮತಿ ಅಕ್ಕಯಮ್ಮ, ಜಿಲ್ಲಾ ತರಬೇತಿ ಆಯುಕ್ತರು(ಗೈಡ್) ಹಾಗೂ ಶ್ರೀ ನಾಗಲಿಂಗಪ್ಪ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಗುಡಿಬಂಡೆ, ರವರುಗಳು ಹಾಜರಿದ್ದರು. ಈ ಸಂದರ್ಭದಲ್ಲಿ ಚಿಕ್ಕಬಳ್ಳಾಪುರ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ – ರೇಂಜರ್‌ಗಳು ಕಛೇರಿಯ ಉದ್ಘಾಟನಾ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.




## ಅಭಿನಂದನೆಗಳು



ಶ್ರೀ **ಅನ್ವರ್‌ಪಾಷ**, ಜಿಲ್ಲಾ ಖಜಾಂಚಿ, ಜಿಲ್ಲಾ ಸಂಸ್ಥೆ, ಭಾರತ್ ಸ್ಕೌಟ್ಸ್-ಗೈಡ್ಸ್, ಚಿತ್ರದುರ್ಗ ಇವರಿಗೆ "ಸಮಾಜ ಸೇವೆಗಾಗಿ" ಪೊಲೀಸ್ ಕವಾಯತು ಮೈದಾನ, ಚಿತ್ರದುರ್ಗದಲ್ಲಿ "ಜಿಲ್ಲಾ ಮಟ್ಟದ ಕನ್ನಡ ರಾಜ್ಯೋತ್ಸವ ಪ್ರಶಸ್ತಿ" ಪ್ರದಾನ ಮಾಡಲಾಯಿತು. ಇವರಿಗೆ ಭಾರತ್ ಸ್ಕೌಟ್ಸ್-ಗೈಡ್ ಸಂಸ್ಥೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

**– ರಾಜ್ಯ ಕಾರ್ಯದರ್ಶಿ**

# ದಕ್ಷಿಣ ಕನ್ನಡ

* ನವೆಂಬರ್ 1 ರಂದು ಮಂಗಳೂರಿನ ನೆಹರೂ ಮೈದಾನದಲ್ಲಿ ನಡೆದ ಜಿಲ್ಲಾ ಮಟ್ಟದ 63ನೇ ಕನ್ನಡ ರಾಜ್ಯೋತ್ಸವ ಪಥ ಸಂಚಲನ ಕಾರ್ಯಕ್ರಮದಲ್ಲಿ ವ್ಯಾಸಮಹರ್ಷಿ ವಿದ್ಯಾಪೀಠ, ಕಿಲ್ಪಾಡಿ, ಮುಲ್ಕಿ ಶಾಲೆಯ 30 ಸ್ಕೌಟ್ಸ್, 30 ಗೈಡ್ಸ್ ವಿದ್ಯಾರ್ಥಿಗಳು ಹಾಗೂ ಗೈಡರ್ ಶ್ರೀಮತಿ ಶೈಲಜಾರವರು ಭಾಗವಹಿಸಿದ್ದರು.

* ನವೆಂಬರ್2 ರಂದು ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಜಿಲ್ಲಾ ಸ್ಕೌಟ್-ಗೈಡ್ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ರವರ ಅಧ್ಯಕ್ಷತೆಯಲ್ಲಿ ಜರುಗಿಸಲಾಯಿತು. ಬಂಟ್ವಾಳ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಹಾಗೂ ದ.ಕ. ಜಿಲ್ಲಾ ರಾಜ್ಯ ಪ್ರತಿನಿಧಿಯಾಗಿರುವ ಶ್ರೀ ಬಿ.ಎಮ್. ತುಂಬೆಯವರು ಪ್ರಾಸ್ತಾವಿಕ ಮಾತುಗಳನ್ನಾಡಿದರು. ಜಿಲ್ಲಾ ಶಿಕ್ಷಣ ಮತ್ತು



ತರಬೇತಿ ಸಂಸ್ಥೆಯ ಹಿರಿಯ ಉಪನ್ಯಾಸಕರು ಹಾಗೂ ಜಿಲ್ಲಾ ಸ್ಕೌಟ್-ಗೈಡ್ ನೋಡಲ್ ಅಧಿಕಾರಿಗಳಾಗಿರುವ ಶ್ರೀ ಜೇಮ್ಸ್ ಕುಟಿನ್ಹಾ ರವರು ಶಿಬಿರವನ್ನು ಉದ್ಘಾಟಿಸಿ, ಸ್ಕೌಟ್-ಗೈಡ್ ಎಂಬುವುದು ಚಟುವಟಿಕೆ ಆಧಾರಿತ ಶೈಕ್ಷಣಿಕ ಚಳುವಳಿಯಾಗಿರುವುದರಿಂದ ಮತ್ತು ಶಾಲೆಗಳಲ್ಲಿ ಇಂತಹ ಚಟುವಟಿಕೆಗಳ ಅವಶ್ಯಕತೆ ಇರುವುದರಿಂದ ಶಿಕ್ಷಣ ಇಲಾಖೆಯಿಂದ ನೀಡಬಹುದಾದ ಎಲ್ಲಾ ರೀತಿಯ ಸಹಕಾರವನ್ನು ನೀಡುವುದಾಗಿ ಭರವಸೆಯಿತ್ತರು. ಫೋರಂ ಫಾರ್ ಜಸ್ಟೀಸ್‌ನ ಅಧ್ಯಕ್ಷರು ಮತ್ತು ಖ್ಯಾತ ವಕೀಲರಾದ ಶ್ರೀ ದಯಾನಂದ ಕೋಟ್ಯಾನ್ ರವರು ಶಿಸ್ತು, ಪ್ರಾಮಾಣಿಕತೆ ಮತ್ತು ದೇಶಸೇವೆ ನಮ್ಮ ಬದುಕಿನ ಜೀವಾಳವಾಗಿರಬೇಕು ಮತ್ತು ನಿಸ್ವಾರ್ಥವನ್ನು ಅನುಸರಿಸಬೇಕು. ಇದನ್ನು ಎಳೆಯ ಪ್ರಾಯದಲ್ಲೇ ಕಲಿಸುವ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯನ್ನು ನಾವು ಬೆಳೆಸಬೇಕು ಎಂದು ತಮ್ಮ ದಿಕ್ಸೂಚಿ ಭಾಷಣದಲ್ಲಿ ಹೇಳಿದರು.

* ಜಿಲ್ಲಾ ಸ್ಕೌಟ್ ಭವನದಲ್ಲಿ ಧ್ವಜ ದಿನಾಚರಣೆಯನ್ನು ಆಚರಿಸಲಾಯಿತು. ಜಿಲ್ಲಾ ಗೈಡ್ ವಿಭಾಗದ ತರಬೇತು ಆಯುಕ್ತರಾದ ಶ್ರೀಮತಿ ಜಯಶ್ರೀ ಎಲ್.ಟಿ.(ಜಿ) ಯವರು ತಮ್ಮ ಪ್ರಾಸ್ತಾವಿಕ ಮಾತುಗಳಲ್ಲಿ ಧ್ವಜ ದಿನಾಚರಣೆಯ ಮಹತ್ವವನ್ನು ತಿಳಿಸಿ ಸ್ವಾಗತಿಸಿದರು. ಮುಖ್ಯ ಅತಿಥಿಗಳಾದ ದ.ಕ. ಜಿಲ್ಲಾ ಭಾರತೀಯ ರೆಡ್‌ಕ್ರಾಸ್ ಸೊಸೈಟಿಯ ಶ್ರೀ ಸಿ.ಎ. ಶಾಂತಾರಾಮ ಶೆಟ್ಟಿಯವರು ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿ ಮಕ್ಕಳಿಗೆ ಪಠ್ಯ ವಿಷಯಗಳಿಂದ ಜ್ಞಾನ ವೃದ್ಧಿಸುವಂತೆ ಪಠ್ಯೇತರ ವಿಷಯಗಳಿಂದ ಮಗುವಿನ ನೈಜ ಪ್ರತಿಭೆಯನ್ನು ಹೊರತರಲು ಸಾಧ್ಯವಿದೆ ಎಂದರು.



ಸಮಾರಂಭದ ಅಧ್ಯಕ್ಷರು ಹಾಗೂ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿಯವರು, ಕಾರ್ಯದರ್ಶಿ ಶ್ರೀ ಎಂ.ಜಿ. ಕಜೆ ಮತ್ತು ಸ್ಕೌಟ್ ವಿಭಾಗದ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಶಾಂತಾರಾಮ ಪ್ರಭು ಉಪಸ್ಥಿತರಿದ್ದರು. ಜಿಲ್ಲಾ ಸಂಘಟಕರಾದ ಶ್ರೀ ಭರತ್ ರಾಜ್ ಕೆ. ಧನ್ಯವಾದ ಸಮರ್ಪಿಸಿದರು. ಬಳಿಕ ಸ್ಕೌಟರ್ಸ್ ಗೈಡರ್ಸ್‌ಗಳಿಗೆ ತೃತೀಯ ಸೋಪಾನ್ ಪರೀಕ್ಷಾ ತಯಾರಿಕೆಯ ಬಗ್ಗೆ ಮತ್ತು ವಿವಿಧ ತರಬೇತುಗಳ ಬಗ್ಗೆ ಮಾಹಿತಿ ನೀಡಲಾಯಿತು.

* ನವೆಂಬರ್ 3 ರಿಂದ 4 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳದಲ್ಲಿ ಜಿಲ್ಲಾ ಮಟ್ಟದ ಕಬ್-ಬುಲ್‌ಬುಲ್ಸ್ ಸಿಕ್ಸರ್ ತರಬೇತಿ ಶಿಬಿರ ನಡೆಯಿತು. ಶಿಬಿರ ನಾಯಕತ್ವವನ್ನು ಶ್ರೀಮತಿ ಶೆಣೈ ಪ್ರಿ-ಎ.ಎಲ್.ಟಿ.(ಫ್ಲಾಕ್) ವಹಿಸಿದ್ದರು. ಸಹಾಯಕರಾಗಿ ಶ್ರೀಮತಿ ಸೇವಂತಿ, ಹೆಚ್.ಡಬ್ಲ್ಯೂ.ಬಿ. (ಫ್ಲಾ) ಭಾಗವಹಿಸಿದ್ದರು.

* ಇದೇ ಸಂದರ್ಭದಲ್ಲಿ ಜಿಲ್ಲಾ ಮಟ್ಟದ ಫ್ಲಾಕ್ ಲೀಡರ್ಸ್-ಕಬ್ ಮಾಸ್ಟರ್ಸ್ ಪುನಶ್ಚೇತರನ ಶಿಬಿರ ನಡೆಯಿತು. ಶಿಬಿರದ ನಾಯಕತ್ವವನ್ನು ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಪ್ರತೀಮ್ ಕುಮಾರ್ ಎಲ್.ಟಿ. (ಸ್ಕೌ), ಸಹಾಯಕರಾಗಿ ಶ್ರೀಮತಿ ಸಂಧ್ಯಾ ಶೆಣೈ, ಪ್ರಿ.ಎ.ಎಲ್.ಟಿ. (ಫ್ಲಾ) ಶ್ರೀಮತಿ ಸೇವಂತಿ ಹೆಚ್.ಡಬ್ಲ್ಯೂ.ಬಿ. (ಫ್ಲಾ) ರವರು ಸಹಕರಿಸಿದರು.

ಶಿಬಿರವನ್ನು ಜಿಲ್ಲಾ ಸಂಘಟಕ ಶ್ರೀ ಭರತ್ ರಾಜ್ ಕೆ. ಸಂಘಟಿಸಿದರು.

* ಮಡಂತ್ಯಾರು ಸ್ಥಳೀಯ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸರಕಾರಿ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆ, ಮಾಲಾಡಿಯಲ್ಲಿ ನಕಾಶೆ ಓದುವಿಕೆ, ಪಯೋನಿಯರಿಂಗ್ ಮತ್ತು ಪ್ರಥಮ ಚಿಕಿತ್ಸೆಯ ಕುರಿತು ವಿಶೇಷ ತರಬೇತಿಯನ್ನು ನೀಡಲಾಯಿತು. ಮಾಲಾಡಿ ಶಾಲಾ ಉಪಾಧ್ಯಕ್ಷೆ ಶ್ರೀಮತಿ ಶಾರದಾರವರು ದೀಪ ಬೆಳಗಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಜಯರಾಜ್‌ರವರು ಮಕ್ಕಳನ್ನು ಪ್ರೋತ್ಸಾಹಿಸಿ, ಶುಭ ಹಾರೈಸಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಹಾಗು. ಅಬ್ದುಲ್ ಲತೀಫ್ ಸಾಹೇಬ್ ರವರು ಮಾತನಾಡುತ್ತಾ ಸ್ಕೌಟ್-ಗೈಡ್ ಶಿಕ್ಷಣ ಎಲ್ಲಾ ಮಕ್ಕಳಿಗೆ ಅಗತ್ಯ ಎಂದರು. ಕಾರ್ಯದರ್ಶಿ ಶ್ರೀ ಎಂ. ಶಾಂತಾರಾಮ್ ಪ್ರಭು ಸ್ವಾಗತಿಸಿದರು. ಕೋಶಾಧಿಕಾರಿ



ಶ್ರೀಮತಿ ಸುಜಾತರವರು ವಂದಿಸಿದರು. ಅಕ್ಷರ ಭಾರತಿ ಆಂಗ್ಲ ಮಾಧ್ಯಮ ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಮೋಹನ್ ಕೆ ರವರು ಸಂಪನ್ಮೂಲ ವ್ಯಕ್ತಿಯಾಗಿ ಸಹಕರಿಸಿದರು. ಗೈಡ್ ಶಿಕ್ಷಕಿ ಶ್ರೀಮತಿ ಪೂರ್ಣಿಮಾ, ಶ್ರೀ ಹರಿಣಾಕ್ಷಿ ಮತ್ತು ಸ್ಕೌಟ್ ಶಿಕ್ಷಕ ಶ್ರೀ ಚಿದಾನಂದರವರು ಸಹಾಯಕರಾಗಿ ಸಹಕರಿಸಿದರು.

## ಗದಗ

ನವೆಂಬರ್ 7 ರಂದು ಧ್ವಜ ದಿನಾಚರಣೆಯನ್ನು ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿ ಆಚರಿಸಲಾಯಿತು. ಧ್ವಜ ಚೀಟಿಯನ್ನು ಶ್ರೀ ಎಂ.ಜಿ. ಹಿರೇಮಠ, ಜಿಲ್ಲಾಧಿಕಾರಿಗಳು, ಗದಗ ಬಿಡುಗಡೆಗೊಳಿಸಿದರು. ಸನ್ಮಾನ್ಯ ಶ್ರೀ ಜಿ.ಎಲ್. ಬಾರಾಟಕ್ಕಿ, ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ, ಶ್ರೀ ಜಿ.ಹೆಚ್. ಪೂಜಾರ, ಜಿಲ್ಲಾ ಕಾರ್ಯದರ್ಶಿ, ಶ್ರೀ ಮಡಿವಾಳರ, ಹೆಡ್ ಕ್ವಾರ್ಟರ್ಸ್, ಕಮೀಷನರ್, ಶ್ರೀ ಜಿ.ಎಸ್. ಗೌಡರ, ಜಿಲ್ಲಾ ಖಜಾಂಚಿ, ಶ್ರೀ ಎಂ.ವಿ. ಪಾಟೀಲ, ಸಹಕಾರ್ಯದರ್ಶಿ ಹಾಗೂ ಶ್ರೀ ಎ.ಎಸ್. ಶಿವುಕುಮಾರ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಭಾಗವಹಿಸಿದ್ದರು.

* ಅಕ್ಟೋಬರ್ 20 ರಂದು ಲಿಂಗೈಕ್ಯರಾದ ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮೀಜಿರವರ ಪಾರ್ಥಿವ ಶರೀರಕ್ಕೆ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಈಶಣ್ಣಾ ಮುನವಳ್ಳಿ, ಶ್ರೀ ರಾಜು ಗುಡಿಮನಿ, ಶ್ರೀ ಜಿ.ಹೆಚ್. ಪೂಜಾರ, ಶ್ರೀ ಹನುಮಾನ ಸಿಂಗ ಮತ್ತು ಶ್ರೀ ಎ.ಎಸ್. ಶಿವಕುಮಾರ ರವರುಗಳು ಸಂಸ್ಥೆಯ ಪರವಾಗಿ ಗೌರವ ನಮನ ಸಲ್ಲಿಸಿದರು.



* ನವೆಂಬರ್ 1 ರಂದು ಜಿಲ್ಲಾಡಳಿತದ ವತಿಯಿಂದ ನಡೆದ ಕರ್ನಾಟಕ ರಾಜ್ಯೋತ್ಸವದ ಪಥಸಂಚಲನದಲ್ಲಿ ಜೆ.ಸಿ. ಪ್ರೌಢಶಾಲೆಯ ಗೈಡ್ಸ್‌ಗಳು ಪ್ರಥಮ ಸ್ಥಾನ ಪಡೆದು ಬಹುಮಾನವನ್ನು ಶ್ರೀ ಎಂ.ಜಿ. ಹಿರೇಮಠ, ಜಿಲ್ಲಾಧಿಕಾರಿಗಳಿಂದ ಪಡೆದರು.



ನವೆಂಬರ್ 1 ರಂದು ಹಾಸನದ ನೆಹರು ಕ್ರೀಡಾಂಗಣದಲ್ಲಿ ಕನ್ನಡ ರಾಜ್ಯೋತ್ಸವದ ಅಂಗವಾಗಿ ಆಕರ್ಷಕ ಪಥಸಂಚಲನ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಗೈಡ್ ವಿಭಾಗದಲ್ಲಿ ಸಂತ ಫಿಲೋಮಿನಾ ಬಾಲಕಿಯರ ಪ್ರೌಢಶಾಲೆ ತಂಡ ದ್ವಿತೀಯ ಬಹುಮಾನ ಪಡೆದುಕೊಂಡಿದೆ. ಇವರಿಗೆ ಕರ್ನಾಟಕ ಸರ್ಕಾರದ ಮಾನ್ಯ ಲೋಕೋಪಯೋಗಿ ಸಚಿವರಾದ ಶ್ರೀ ಹೆಚ್.ಡಿ. ರೇವಣ್ಣನವರು ಹಾಗು ಜಿಲ್ಲಾಧಿಕಾರಿ ಶ್ರೀಮತಿ ರೋಹಿಣಿ ಸಿಂಧೂರಿ ಅವರು ಬಹುಮಾನ ವಿತರಿಸಿದರು. ಶ್ರೀ ಕೊಟ್ರೇಶ್ ಎಸ್. ಉಪ್ಪಾರ್, ಸ್ಕೌಟ್ ಮಾಸ್ಟರ್ ಇವರಿಗೆ ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಕ್ಕಾಗಿ ಕನ್ನಡ ರಾಜ್ಯೋತ್ಸವ ದಿನದಂದು ಜಿಲ್ಲಾಡಳಿತವು ಸನ್ಮಾನಿಸಿತು.



* ನವೆಂಬರ್ 1 ರಂದು ರಾಷ್ಟ್ರೀಯ ಹಬ್ಬಗಳ ಆಚರಣಾ ಸಮಿತಿ ವತಿಯಿಂದ ಅರಸೀಕೆರೆ ತಾಲ್ಲೂಕಿನಲ್ಲಿ ನಡೆದ ಕನ್ನಡ ರಾಜ್ಯೋತ್ಸವದ ಕಾರ್ಯಕ್ರಮದಲ್ಲಿ ರಾಜ್ಯ ಪುರಸ್ಕಾರ್ ಪಡೆದ ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌ.ಶಾ.ವಿ), ಗಂಡಿ ಶಾಲೆಯ 5 ಗೈಡ್ಸ್, 2 ಸ್ಕೌಟ್ಸ್, ಮುರುಂಡಿ, ಸರ್ಕಾರಿ ಪ್ರೌಢಶಾಲೆಯ ಒಂದು ಗೈಡ್ ಹಾಗು ಕುರುವಂಕ ಸರ್ಕಾರಿ ಪ್ರೌಢಶಾಲೆಯ ಒಂದು ಸ್ಕೌಟ್‌ಗೆ ಸನ್ಮಾನಿಸಿ ಗೌರವಿಸಲಾಯಿತು.

* ನವೆಂಬರ್ 1ರಂದು ಕನ್ನಡ ರಾಜ್ಯೋತ್ಸವ ದಿನಾಚರಣೆಯ ಅಂಗವಾಗಿ ಸಕಲೇಶಪುರ ತಾಲ್ಲೂಕ್ ಮಟ್ಟದ ಪಥಸಂಚಲನ ಕಾರ್ಯಕ್ರಮದಲ್ಲಿ ಸಂತ ಜೋಸೆಫ್ ಪ್ರೌಢ ಶಾಲೆಯ ಗೈಡ್ಸ್‌ಗಳಿಗೆ ಬಹುಮಾನ ನೀಡಲಾಯಿತು. ಈ ಸಂದರ್ಭದಲ್ಲಿ ಗೈಡ್ ಕ್ಯಾಪ್ಟನ್ ಶ್ರೀಮತಿ ಎಸ್.ಎಂ. ಚಂದ್ರಮತಿ ಹಾಗೂ ಗೈಡ್‌ಗಳು ಉಪಸ್ಥಿತರಿದ್ದರು.



* ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಹಾಗೂ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಉದಯಪುರ, ಚನ್ನರಾಯಪಟ್ಟಣ ತಾ॥ ಇವರ ಸಂಯುಕ್ತಾಶ್ರಯದಲ್ಲಿ ಮೂರು ದಿನಗಳ ಕಾಲ ನಿಪುಣ್ ಪರೀಕ್ಷಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪನವರು ಉದ್ಘಾಟಿಸಿ ಮಾತನಾಡುತ್ತ ಇಂದಿನ ಯುವ ಜನಾಂಗದಲ್ಲಿ ಮಿತಿಮೀರಿದ ಮೊಬೈಲ್ ಬಳಕೆ ಅನೇಕ ದುಷ್ಪರಿಣಾಮಗಳಿಗೆ ಕಾರಣವಾಗಿದೆ. ಮೊಬೈಲ್ ಬಳಕೆಯನ್ನು ಯುಕ್ತವಾಗಿ ಬಳಸಿ ಎಂದು ಕರೆಕೊಟ್ಟರು.

ಜಿಲ್ಲಾ ಆಯುಕ್ತರುಗಳಾದ ಶ್ರೀ ಪ್ರಕಾಶ್ ಎಸ್. ಯಾಜಿ, ಶ್ರೀಮತಿ ಗಿರಿಜಾಂಬಿಕೆ, ಜಿಲ್ಲಾ ಉಪಾಧ್ಯಕ್ಷರುಗಳಾದ ಶ್ರೀ ಸುರೇಶ್ ಗುರೂಜಿ, ಶ್ರೀಮತಿ ಜಯಾರಮೇಶ್ ಉಪಸ್ಥಿತರಿದ್ದರು. ಶ್ರೀ ಹೆಚ್.ಎಂ. ಗೌಡಯ್ಯ, ರೋವರ್ ವಿಭಾಗದ ನಾಯಕರಾದ ಶ್ರೀ ರಾಜೇಶ್ ವಿ. ಅವಲಕ್ಕಿ, ರೇಂಜರ್ ವಿಭಾಗದ ನಾಯಕಿಯಾದ ಜಿಲ್ಲಾ ಸಂಘಟಕಿ ಕು॥ ಪ್ರಿಯಾಂಕ ಹೆಚ್.ಎಂ. ಉದಯಪುರ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಸಿ.ಎಸ್. ಶಿವಕುಮಾರ್ ರವರು ಅಧ್ಯಕ್ಷತೆಯನ್ನು ವಹಿಸಿದ್ದರು.

ಸೆಪ್ಟೆಂಬರ್ 24 ರಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು ಹಾಗೂ ಮುಕ್ತಾಯ ಸಮಾರಂಭ ಕಾರ್ಯಕ್ರಮವನ್ನು ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀ ರಾಮಕೃಷ್ಣ ಆಶ್ರಮದ ಶ್ರೀ ಸರ್ವ ಜಯಾನಂದ ಜೀ ಮಹಾರಾಜರವರು ಭಾಗವಹಿಸಿ ರೋವರ್ಸ್‌ಗಳಿಗೆ ಉಡುಪುಗಳನ್ನು ಹಾಗೂ ರೇಂಜರ್ಸ್‌ಗಳಿಗೆ ಪುಸ್ತಕಗಳನ್ನು ನೀಡುವುದರ ಮೂಲಕ ಶುಭ ಹಾರೈಸಿದರು. ಇದೇ ಸಂದರ್ಭದಲ್ಲಿ ರೋವರಿಂಗ್ ಶತಮಾನೋತ್ಸವ ಕಾರ್ಯಕ್ರಮವನ್ನು ಕೇಕ್ ಕಟ್ ಮಾಡುವ ಮೂಲಕ ಆಚರಣೆ ಮಾಡಲಾಯಿತು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳೂ ಭಾಗವಹಿಸಿದ್ದರು. ನಿಪುಣ್ ಪರೀಕ್ಷಾ ಶಿಬಿರದಲ್ಲಿ ಒಟ್ಟು 360 ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

## ಹಾವೇರಿ

ನವೆಂಬರ್ 1 ರಂದು 63ನೇ ಕರ್ನಾಟಕ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ನಗರದ ಜೆ.ಪಿ. ಪ್ರೌಢಶಾಲೆ ಮತ್ತು ಕೆ.ಎಲ್.ಇ. ಪ್ರೌಢಶಾಲೆ ಸ್ಕೌಟ್ಸ್-ಗೈಡ್ಸ್‌ಗಳು ಪಥಚಲನೆಯಲ್ಲಿ ಭಾಗವಹಿಸಿ ಜೆ.ಪಿ. ರೋಟರಿ ಪ್ರೌಢಶಾಲೆಯ ಸ್ಕೌಟ್ಸ್‌ಗಳು ಪ್ರಥಮ ಸ್ಥಾನ ಹಾಗೂ ಕೆ.ಎಲ್.ಇ. ಪ್ರೌಢಶಾಲೆ ಮಕ್ಕಳು ಪಥಚಲನೆಯಲ್ಲಿ ದ್ವಿತೀಯ ಸ್ಥಾನ ಗಳಿಸಿದ್ದು, ಶ್ರೀ ಎಸ್.ಕೆ. ಕರಿಯಣ್ಣನವರು ಅಧ್ಯಕ್ಷರು, ಜಿಲ್ಲಾ ಪಂಚಾಯತ್. ಹಾವೇರಿ, ಪ್ರಮಾಣ ಪತ್ರ ನೀಡಿ ಗೌರವಿಸಿದರು.



## ಕಾರವಾರ

ಕಾರವಾರ ಜಿಲ್ಲಾ ಸಂಸ್ಥೆ ಹೊನ್ನಾವರ ತಾಲೂಕಿನಲ್ಲಿ ಸಂಸ್ಥಾಪನಾ ದಿನಾಚರಣೆಯ ಧ್ವಜ ಚೀಟಿ ಬಿಡುಗಡೆ ಹಾಗೂ ಸ್ವಚ್ಛತಾ ಅಭಿಯಾನ ಕಾರ್ಯಕ್ರಮವನ್ನು ನಗರದ ನ್ಯಾಯಾಲಯದ ಆವರಣದಲ್ಲಿ ಶ್ರೀ ಕೆ.ಎಮ್ ಚೆನ್ನಕೇಶವ ರೆಡ್ಡಿ ಮುಖ್ಯ ನ್ಯಾಯಾಧೀಶರು ಧ್ವಜ ಚೀಟಿ ಬಿಡುಗಡೆ ಮಾಡಿ ಸ್ಕೌಟ್ಸ್-ಗೈಡ್ಸ್ ವಿಷಯ ಕುರಿತಂತೆ ಪ್ರತಿಯೊಬ್ಬ ವಿದ್ಯಾರ್ಥಿಯು ಕಡ್ಡಾಯವಾಗಿ ಸ್ಕೌಟ್-ಗೈಡನ್ನು ಸೇರಬೇಕು. ಸ್ಕೌಟ್-ಗೈಡ್‌ನಲ್ಲಿರುವ ನಿಯಮಗಳನ್ನು ಅನುಸರಿಸಿಕೊಂಡು, ಅಳವಡಿಸಿಕೊಂಡಲ್ಲಿ ದೇಶಪ್ರಗತಿಗೆ ಮತ್ತು ವೈಯ್ತಿಕ ಜೀವನಕ್ಕೆ ಅವಶ್ಯಕ ಅಂಶಗಳಿರುವ ಈ



ಸಂಸ್ಥೆಯಲ್ಲಿ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಸಮಾಜದ ಏಳಿಗೆಗೆ ತಾವೆಲ್ಲರೂ ಪಣತೊಡಬೇಕೆಂದು ನುಡಿದರು. ಶ್ರೀ ಬದರಿನಾಥ ನಾಯರ್ ಎ.ಪಿ.ಪಿ. ಶ್ರೀ ಜಿ.ಜಿ. ಸಭಾಯಿತ್ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಆರ್.ಟಿ. ಹೆಬ್ಬಾರ್

## ಕೊಪ್ಪಳ

ಅಕ್ಟೋಬರ್ 4 ರಂದು ಕೊಪ್ಪಳ ತಾಲೂಕಾ ಶಿಕ್ಷಕರ ಭವನದಲ್ಲಿ ಕೊಪ್ಪಳ ತಾಲ್ಲೂಕಾ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಜರುಗಿತು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್ಸ್‌ನ ಆಯುಕ್ತರಾದ ಶ್ರೀ ಮಲ್ಲಿಕಾರ್ಜುನ ಚೌಕಿಮಠ, ಶ್ರೀಮತಿ ಮಲ್ಲೇಶ್ವರ ಜುಜಾರೆ ಎ.ಎಸ್.ಓ.ಸಿ, ಶ್ರೀಮತಿ ಅರುಣಾ ವಸ್ತ್ರದ, ಗೈಡ್ ಆಯುಕ್ತರು, ಶ್ರೀ ಕಾಂತ ಮಾಸಗಟ್ಟಿ ಡಿ.ಟಿ.ಸಿ., ಶ್ರೀ ಯರ್ರಣ್ಣಮ ಕಾರ್ಯದರ್ಶಿ, ಗಂಗಾವತಿ, ಹಾಗೂ ಕೊಪ್ಪಳ ತಾಲೂಕ ಬಿ.ಆರ್.ಸಿ., ಸಿ.ಆರ್.ಸಿ ಅಧಿಕಾರಿಗಳು ಇತರರು ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಶ್ರೀಮತಿ ಮಲ್ಲೇಶ್ವರಿ ಜುಜಾರೆ ಮಾತನಾಡಿ ವಿದ್ಯಾರ್ಥಿಗಳಿಗೆ ಲಾಗ್‌ಬುಕ್ ಮತ್ತು ಸಮವಸ್ತ್ರದ ಕುರಿತು ಒದಗಿಸುವ ವ್ಯವಸ್ಥೆ ಮಾಡಲಾಗುವುದು ಎಂದು ತಿಳಿಸಿದರು. ಶ್ರೀ ಶ್ರೀಕಾಂತ ಮಾಸಗಟ್ಟಿ ಡಿ.ಟಿ.ಸಿ., ಯವರು ಸ್ಕೌಟರ್ಸ್-ಗೈಡರ್ಸ್‌ಗಳಿಗೆ ಚಾರ್ಟರ್ ವಾರೆಂಟ್‌ಗಳ ಪ್ರಾಮುಖ್ಯತೆ ಬಗ್ಗೆ ಮಾಹಿತಿ ನೀಡಿದರು, ತಾಲೂಕ ಕಾಯಾದರ್ಶಿಗಳಾದ ಶ್ರೀ ಮಲ್ಲಪ್ಪ ಗುಡದಣ್ಣನವರ ಮಾತನಾಡಿ ಕಾರ್ಯಕ್ರಮದಲ್ಲಿ ಆಗಮಿಸಿದ ಸ್ಕೌಟರ್ಸ್-ಗೈಡರ್ಸ್‌ನ ಸ್ಕೌಟ್ಸ್-ಗೈಡ್ಸ್‌ನ ಮಕ್ಕಳ ವಿವರವನ್ನು ಕೇಳಿ ಲಾಗ್ ಪುಸ್ತಕ ಹಾಗೂ ಸಮವಸ್ತ್ರ ಒದಗಿಸಿ ಕೊಡಲಾಗುವುದು ಎಂದು ತಿಳಿಸಿದರು.

* ನವೆಂಬರ್ 1 ರಂದು ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿನಲ್ಲಿ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮವನ್ನು ಆಚರಿಸಲಾಯಿತು. ಕೊಪ್ಪಳ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ವಿವಿಧ ಶಾಲೆಗಳಿಂದ ಸ್ಕೌಟ್ಸ್-






ಗೈಡ್ಸ್‌ಗಳು ಪಥಸಂಚಲನದಲ್ಲಿ ಭಾಗವಹಿಸಿದ್ದರು. ಈ ಪಥಸಂಚಲನದಲ್ಲಿ ಸರಸ್ವತಿ ವಿದ್ಯಾಮಂದಿರ ಶಾಲೆಯ ಸ್ಕೌಟ್ಸ್‌ಗಳು ಅತ್ಯುತ್ತಮ ತಂಡವೆಂದು ಪ್ರಥಮ ಬಹುಮಾನ ಪಡೆದರು. ಸಂಸದ ಸನ್ಮಾನ್ಯ ಶ್ರೀ ಕರಡಿ ಸಂಗಣ್ಣ, ಶಾಸಕರಾದ ಶ್ರೀ ರಾಘವೇಂದ್ರ ಹಿಟ್ನಾಳ, ಜಿಲ್ಲಾದಿಕಾರಿ ಶ್ರೀ ಪಿ. ಸುನಿಲ್ ಕುಮಾರ್, ಎಸ್.ಪಿ, ಶ್ರೀಮತಿ ರೇಣುಕಾ ಕೆ. ಉಪಸ್ಥಿತರಿದ್ದರು.

* ಅಕ್ಟೋಬರ್ 10 ರಂದು ಸ್ವಾಮಿ ವಿವೇಕಾನಂದರ ಚಿಕಾಗೋ ಭಾಷಣದ 125ನೇ ವರ್ಷಾಚರಣೆಯ ರಥಯಾತ್ರೆ ಕೊಪ್ಪಳ ಜಿಲ್ಲೆಗೆ ಆಗಮಿಸಿತು. ಆಗ ಈ ರಥಯಾತ್ರೆಯನ್ನು ಕೊಪ್ಪಳ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್-ರೇಂಜರ್ಸ್ ಹಾಗೂ ಸ್ವಾಮಿ ವಿವೇಕಾನಂದ ರಾಮಕೃಷ್ಣಾ ಆಶ್ರಮದ ಸ್ವಾಮೀಜಿಗಳು ಬರಮಾಡಿಕೊಂಡರು. ಕಾರ್ಯಕ್ರಮದಲ್ಲಿ ಶ್ರೀಮತಿ ಶೋಭಾ, ರೇಂಜರ್ ಲೀಡರ್ (ಉಪನ್ಯಾಸಕರು) ಮಾತನಾಡಿ ಯುವಶಕ್ತಿಯ ಮಹತ್ವವನ್ನು ತಿಳಿಸಿದರು. ಹಾಗೂ ಸ್ವಾಮೀಜಿಗಳು ಮಾತನಾಡಿ ಆಶೀರ್ವದಿಸಿದರು. ನಂತರ ಪ್ರಥಮ ದರ್ಜೆ ಕಾಲೇಜಿನಲ್ಲಿ "ರಾಷ್ಟ್ರೀಯ ಸೇವಾ ಸುವರ್ಣ ಮಹೋತ್ಸವವನ್ನು ಸಹ ಆಚರಿಸಲಾಯಿತು.

* ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಧ್ವಜ ಚೀಟಿಗಳನ್ನು ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ವಿಶಾಲ್ ಕುಮಾರ್ ಭಾ.ಆ.ಸೇ. ಇವರು ಬಿಡುಗಡೆ ಮಾಡಿದರು. ಮತ್ತು ಸ್ಕೌಟ್-ಗೈಡ್ ಎಲ್ಲಾ ಕಾರ್ಯಕ್ರಮಗಳಿಗೂ ಸ್ಪಂಧಿಸುವುದಾಗಿ ತಿಳಿಸಿದರು. ಶ್ರೀಮತಿ ಅರುಣಾ ವಸ್ತ್ರದ ಜಿ.ಆ. (ಗೈ) ದಿನದ ಮಹತ್ವದ ಬಗ್ಗೆ ತಿಳಿಸಿದರು. ಇದೇ ರೀತಿ ಉಪನಿರ್ದೇಶಕರಾದ ಶ್ರೀಮತಿ ಉಮಾದೇವಿ ಸೊನ್ನದ್, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಶೋಭಾ, ಪರಿಸರ ಮಾಲಿನ್ಯಾಧಿಕಾರಿ ಶ್ರೀ ಮಂಜುನಾಥ್, ಶ್ರೀ ಈರಣ್ಣ ಚಂಜಕಾಳ, ಉಪನಿರ್ದೇಶಕರು ಮಕ್ಕಳ ಮತ್ತು ಕಲ್ಯಾಣ, ಅಭಿವೃದ್ಧಿ ಇಲಾಖೆ ಶ್ರೀ ಎಲ್.ಜಿ. ರಾಠಿಮನಿ, ಆರೋಗ್ಯ ಇಲಾಖೆ ಮುಂತಾದವರ ಕಛೇರಿಗಳಲ್ಲಿಯೂ ಸಹ ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಲಾಯಿತು. ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟ್-ಗೈಡ್‌ಗು ಉಪಸ್ಥಿತರಿದ್ದರು.

## ಕೊಡಗು

ನವೆಂಬರ್ 7 ರಂದು ಡಾ. ಸುಮನ್ ಪನ್ನೇಕರ್, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಧ್ವಜ ದಿನಾಚರಣೆಯನ್ನು ಆಚರಿಸಲಾಯಿತು.

ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಕೆ.ಬಿ. ಕಾಳಪ್ಪನವರು ಧ್ವಜ ದಿನದ ಮಹತ್ವದ ಬಗ್ಗೆ ತಿಳಿಸಿಕೊಟ್ಟರು. ಕಾರ್ಯಕ್ರಮದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಮಚಾಡೊ, ಜಿಲ್ಲಾ ಖಜಾಂಚಿ ಶ್ರೀ ಸೋಮಯ್ಯ, ಶಿಕ್ಷಕಿ ಶ್ರೀಮತಿ ಶಾಲಿನಿ, ಸ್ಕೌಟ್ ಆಯುಕ್ತರಾದ ಶ್ರೀ ಜಿಮ್ಮಿ ಸಿಕ್ವೇರ, ಜಿಲ್ಲಾ ಸಂಘಟಕರಾದ ಶ್ರೀಮತಿ ಯು.ಸಿ. ದಮಯಂತಿ, ಸಂತ ಜೋಸೆಫ್ ಆಂಗ್ಲ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಯ ಗೈಡ್ಸ್ ಮತ್ತು ಬುಲ್ ಬುಲ್‌ಗಳು ಹಾಗೂ ಶಿಕ್ಷಕಿ ಶ್ರೀಮತಿ ಜೆ.ಸಿಯವರು ಭಾಗವಹಿಸಿದ್ದರು.



* ನವೆಂಬರ್ 18 ರಂದು ಕೊಡಗು ಜಿಲ್ಲಾ ಸಂಸ್ಥೆಯಿಂದ ಜಿಲ್ಲಾ ಮಟ್ಟದ ಜಿಲ್ಲಾ ಪುರಸ್ಕಾರ ಪರೀಕ್ಷಾ ಶಿಬಿರವನ್ನು ಸರ್ಕಾರಿ ಪ.ಪೂ. ಕಾಲೇಜಿನ ಪ್ರೌಢಶಾಲಾ ವಿಭಾಗದ ಆವರಣದಲ್ಲಿ ಹಮ್ಮಿಕೊಳ್ಳಲಾಗಿತ್ತು.



ಶ್ರೀ ಕೆ.ಬಿ. ಕಾಳಪ್ಪ, ಜಿಲ್ಲಾ ಮುಖ್ಯ ಆಯುಕ್ತರು ಧ್ವಜಾರೋಹಣ ಮಾಡುವುದರ ಮೂಲಕ ಶಿಬಿರಕ್ಕೆ ಚಾಲನೆ ನೀಡಿದರು. ಶಿಬಿರದಲ್ಲಿ ಒಟ್ಟು 340 ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

ಶಿಬಿರದ ನಾಯಕರಾಗಿ ಶ್ರೀ ರಂಜಿತ್, ಕೆ.ಯು, ಸ್ಕೌಟ್ ವಿಭಾಗಕ್ಕೆ ಶ್ರೀಮತಿ ಸಗಾಯಿ ಮೇರಿ, ಗೈಡ್ ವಿಭಾಗಕ್ಕೆ ಶ್ರೀಮತಿ ರತಿಕುಮಾರಿ, ಕಬ್ ವಿಭಾಗ, ಶ್ರೀಮತಿ ಶಾಲಿನಿ ಬುಲ್‌ಬುಲ್ ವಿಭಾಗದಲ್ಲಿ ಕಾರ್ಯನಿರ್ವಹಿಸಿದರು.

## ಕೋಲಾರ

ಅಕ್ಟೋಬರ್ 16 ರಂದು ಶ್ರೀನಿವಾಸಪುರ ಸ್ಥಳೀಯ ಸಂಸ್ಥೆ ಮತ್ತು ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಒಂದು ದಿನದ ಸ್ವಚ್ಛಭಾರತ ಅಭಿಯಾನ ಶಿಬಿರವನ್ನು ಶ್ರೀನಿವಾಸಪುರ ಪಟ್ಟಣದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಶಂಶುನ್ನೀಸಾ, ತಾಲ್ಲೂಕು ಸ್ವಚ್ಛ ಭಾರತ ನೋಡಲ್ ಅಧಿಕಾರಿ ಶ್ರೀಮತಿ ಛಾಯಾ ಬಾಲಚಂದರ್ ರವರು ಉದ್ಘಾಟಿಸಿದರು. ಈ ಶಿಬಿರದಲ್ಲಿ ಸುಮಾರು 230 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿ ಶ್ರೀನಿವಾಪುರ ಪಟ್ಟಣದಲ್ಲಿ ಪ್ರಮುಖ ಬೀದಿಗಳಲ್ಲಿ ಸ್ವಚ್ಛತೆಯ ಅರಿವು ಮೂಡಿಸುವ ಜಾಗೃತಿ ಜಾಥಾ ನಡೆಸಿ, ಪಟ್ಟಣದ ಬೀದಿಗಳಲ್ಲಿನ ಪ್ಲಾಸ್ಟಿಕ್ ಸಂಗ್ರಹಿಸಿದರು. ಈ ಸಂದರ್ಭದಲ್ಲಿ ಸ್ಥಳೀಯ ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.



* ಅಕ್ಟೋಬರ್ 25 ರಂದು ಜಿಲ್ಲಾ ಸಂಸ್ಥೆ ಕೋಲಾರ ಮತ್ತು ಆರ್. ಎಲ್. ಜಾಲಪ್ಪ ಆಸ್ಪತ್ರೆ ವತಿಯಿಂದ ಉಚಿತ ಆರೋಗ್ಯ ತಪಾಸಣಾ ಶಿಬಿರವನ್ನು ಆರ್.ಎಂ. ಇಂಟರ್‌ನ್ಯಾಷನಲ್ ಶಾಲೆ, ಮುದಿಗೆರೆ ಕ್ರಾಸ್‌ನಲ್ಲಿ ಆಯೋಜಿಸಲಾಗಿದ್ದು ಈ ಶಿಬಿರದಲ್ಲಿ ಸುಮಾರು 480 ಜನ ತಪಾಸಣೆಯನ್ನು ಮಾಡಿಸಿಕೊಂಡರು. ಈ ಶಿಬಿರದ ಉದ್ಘಾಟನೆಯನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್ ರವರು ದೀಪ ಬೆಳಗಿಸುವ ಮೂಲಕ ನೆರವೇರಿಸಿದರು. ಈ ಸಮಾರಂಭದಲ್ಲಿ ಶ್ರೀ ಕೆ. ಶ್ರೀನಿವಾಸ್ ದೈಹಿಕ ಶಿಕ್ಷಣಾಧಿಕಾರಿ, ಆರ್.ಎಲ್. ಜಾಲಪ್ಪ ಆಸ್ಪತ್ರೆಯ ಸಾರ್ವಜನಿಕ ಸಂಪರ್ಕಾಧಿಕಾರಿಗಳಾದ ಡಾ॥ ಕೃಷ್ಣಮೂರ್ತಿ, ಡಾ॥ ಅನಿತಾ, ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ತ್ಯಾಗರಜ್, ರೋಟರಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ರಮೇಶ್ ಮುಂತಾದವರು ಭಾಗವಹಿಸಿದ್ದರು.

* ಅಕ್ಟೋಬರ್ 31 ರಂದು ಕೋಲಾರ ನಗರದ ಹಳೇ ಮಾಧ್ಯಮಿಕ ಶಾಲಾ ಆವರಣದಲ್ಲಿ ರಾಷ್ಟ್ರೀಯ ಏಕತಾ ದಿನಾಚರಣೆಯ ಅಂಗವಾಗಿ ಶಾಲಾ ಮಕ್ಕಳಿಗೆ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಈ ಸಮಾರಂಭದಲ್ಲಿ ಶಾಲಾ ಮುಖ್ಯ ಶಿಕ್ಷಕ ಸರೋಜಮ್ಮ, ಶಾಲಾ ಶಿಕ್ಷಕಿ ಶ್ರೀಮತಿ ಪದ್ಮಮ್ಮ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

* ನವೆಂಬರ್ 1 ರಂದು ಕನ್ನಡ ರಾಜ್ಯೋತ್ಸವವನ್ನು ಜಿಲ್ಲಾ ಸಂಸ್ಥೆ ಕೋಲಾರ ಮತ್ತು ಸ್ಥಳೀಯ ಸಂಸ್ಥೆ ವತಿಯಿಂದ ನಡೆಸಲಾಯಿತು. 'ಪಟಾಕಿ ಬೇಡ, ದೀಪ ಬೆಳಗಿಸಿ, ಎಂಬ ಸ್ಥಬ್ದ ಚಿತ್ರದ ಮೂಲಕ ಸಾರ್ವಜನಿಕರಿಗೆ ಅರಿವು ಮೂಡಿಸುವ ಕೆಲಸವನ್ನು ಮಾಡಲಾಯಿತು. ಸ್ಥಬ್ಧ ಚಿತ್ರದ ಮೆರವಣಿಗೆಗೆ ಜಿಲ್ಲಾ ಖಜಾಂಚಿಗಳಾದ ಶ್ರೀ ಪ್ರಹ್ಲಾದ್ ರಾವ್, ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಶ್ರೀಮತಿ ಕೆ.ಆರ್. ಜಯಶ್ರೀ ರವರು ಚಾಲನೆ ನೀಡಿದರು. ಜಿಲ್ಲಾ ಮಟ್ಟದ ಕಾರ್ಯಕ್ರಮದಲ್ಲಿ ದ್ವಿತೀಯ ಸ್ಥಾನವನ್ನು ನಮ್ಮ ಸಂಸ್ಥೆ ಗಳಿಸಿತು. ಈ ಮೆರವಣಿಗೆಯಲ್ಲಿ ಕರ್ನಾಟಕದ ವೀರವನಿತೆಯರ, ಕವಿಗಳ, ರೇಂಜರುಗಳ ವೇಷಭೂಷಣವನ್ನು ಸ್ಕೌಟ್ಸ್-ಗೈಡ್ಸ್‌ಗಳು ಧರಿಸಿದ್ದರು.

* ನವೆಂಬರ್ 10 ರಂದು ಕೋಲಾರ ನಗರದ ಚಿನ್ಮಯ ವಿದ್ಯಾಲಯದಲ್ಲಿ ಚಿನ್ಮಯ ಸ್ಕೌಟ್ಸ್-ಗೈಡ್ಸ್ ದಳಗಳನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪನವರು ಉದ್ಘಾಟಿಸಿದರು. ಅಧ್ಯಾಪಕರಾದ ಶ್ರೀ ಬಸಪ್ಪಗೌಡ, ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಶ್ರೀಮತಿ ಕೆ.ಆರ್. ಜಯಶ್ರಿ, ಚಿನ್ಮಯಿ ಶಾಲೆಯ ಅಧ್ಯಕ್ಷರಾದ ಶ್ರೀ ಚಂದ್ರಶೇಖರ್, ಖಜಾಂಚಿ, ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಬಾಬು ವಿ. ಜಿಲ್ಲಾ ಸಂಘಟಕ ಶ್ರೀ ವಿ. ವಿಶ್ವನಾಥ, ಕೋಲಾರ್ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಅಪ್ಪಿನಾರಾಯಣಸ್ವಾಮಿ, ಶಾಲೆಯ ಸ್ಕೌಟ್ ಶಿಕ್ಷಕರಾದ ಶ್ರೀ ಶ್ರೀನಿವಾಸ ಮತ್ತು ಶ್ರೀ ಲೋಕೇಶ್ ರವರು ಉಪಸ್ಥಿತರಿದ್ದರು.

* ನವೆಂಬರ್ 16 ರಂದು ಕೋಲಾರ ನಗರದ ಮಹಿಳಾ ಕಾಲೇಜಿನಲ್ಲಿ ಧ್ವಜ ದಿನಾಚರಣೆ ಮತ್ತು ರಾಜ್ಯ ಪುರಸ್ಕಾರ ಪ್ರಶಸ್ತಿ ಪ್ರಧಾನ ಸಮಾರಂಭವನ್ನು ಆಯೋಜಿಸಲಾಗಿತ್ತು. ಈ ಸಮಾರಂಭವನ್ನು ಕೋಲಾರ ರಾಜ್ಯ ಜಿಲ್ಲಾ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಾದ ಶ್ರೀ ಜಗದೀಶ್ ರವರು ಗಿಡಕ್ಕೆ ನೀರನ್ನು ಹಾಕುವ ಮೂಲಕ ಚಾಲನೆ ನೀಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ದೇಶ ಮತ್ತು ವಿಶ್ವದ ಶಾಂತಿಗಾಗಿ ದುಡಿಯುತ್ತಾ ಮಕ್ಕಳಲ್ಲಿ ಬಾಲ್ಯದಿಂದಲೇ ಉತ್ತಮ ಮೌಲ್ಯಗಳನ್ನು ರೂಡಿಸುತ್ತಾ




ಬಂದಿದ್ದು, ನಮ್ಮ ಸುತ್ತಲಿನ ಪರಿಸರದ ಸ್ವಚ್ಛತೆಗೆ ಹಾಗೂ ಉತ್ತಮ ಹವ್ಯಾಸಗಳನ್ನು ರೂಡಿಸಿಕೊಂಡು ಸಮಾಜಕ್ಕೆ ತಮ್ಮದೇ ಆದಂತಹ ಸೇವೆಯನ್ನು ಸಲ್ಲಿಸುವಂತಾಗಲಿ ಎಂದು ಆಶಿಸಿದರು. ಈ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್, ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಶ್ರೀಮತಿ ಕೆ.ಆರ್. ಜಯಶ್ರೀ, ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ತ್ಯಾಗರಾಜ್, ಜಿಲ್ಲಾ ಉಪನಿರ್ದೇಶಕರಾದ ಶ್ರೀ ರತ್ನಯ್ಯ, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ರಘುನಾಥರೆಡ್ಡಿ ಹಾಗೂ 380 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ನವೆಂಬರ್ 12 ರಂದು ಮಾಲೂರು ಸ್ಥಳೀಯ ಸಂಸ್ಥೆಯ ವ್ಯಾಪ್ತಿಯ ಮಾಲೂರು ನಗರದಲ್ಲಿನ ಜೆ.ಎಸ್.ಎಸ್. ಪಬ್ಲಿಕ್ ಶಾಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ದಳಗಳನ್ನು ಉದ್ಘಾಟಿಸಲಾಯಿತು. ಈ ಸಮಾರಂಭದಲ್ಲಿ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಅಶ್ವಥ್ ರೆಡ್ಡಿ, ಶ್ರೀ ನಂಜುಂಡಗೌಡ, ಕಾರ್ಯದರ್ಶಿ, ಶ್ರೀ ರಾಜಪ್ಪ, ಖಜಾಂಚಿ, ಶ್ರೀ ವೆಂಕಟೇಶ್, ಜಿಲ್ಲಾ ಸಂಘಟಕ ಶ್ರೀ ಬಾಬು. ವಿ. ಜಿಲ್ಲಾ ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಸಿ.ಜಿ. ಮುರುಳಿ ಉಪಸ್ಥಿತರಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಲೆಯ ಮುಖ್ಯ ಶಿಕ್ಷಕಿ ವಹಿಸಿದ್ದರು.

* ನವೆಂಬರ್ 16 ರಂದು ಮುಳಬಾಗಿಲು ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ಮುಳಬಾಗಿಲು ತಾಲ್ಲೂಕು ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಪಟ್ಟಣದ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಲಾಗಿತ್ತು. ಹಿರಿಯ ಸ್ಕೌಟ್ ಮಾಸ್ಟರ್ ಶ್ರೀ ಚಾಂದ್ ಪಾಷ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಭಾಸ್ಕರ್ ರೆಡ್ಡಿ, ಜಿಲ್ಲಾ ಸಂಘಟಕ ಶ್ರೀ ವಿಶ್ವನಾಥ್ ರವರು ಉಪಸ್ಥಿತರಿದ್ದರು.

* ಅಕ್ಟೋಬರ್ 27 ರಂದು ಕೆ.ಜಿ.ಎಫ್.ನ ಜೈನ್ ಇಂಟರ್ ನ್ಯಾಷನಲ್ ಶಾಲಾ ಆವರಣದಲ್ಲಿ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ನೂತನ ದಳಗಳನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಉದ್ಘಾಟಿಸಿದರು. ಶಾಲಾ ಪ್ರಾಂಶುಪಾಲರಾದ ಶ್ರೀಮತಿ ರತ್ನಪ್ರಭಾ, ಜಿಲ್ಲಾ ಆಯುಕ್ತರಾದ ಸುರೇಶ್, ಜಯಶ್ರೀ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಬಾಬು. ವಿ. ಕೆ.ಜಿ.ಎಫ್. ಕಾರ್ಯದರ್ಶಿ ಶ್ರೀ ರಚನ್‌ದಾಸ್, ತಾಲ್ಲೂಕು ದೈಹಿಕ ಶಿಕ್ಷಣಾಧಿಕಾರಿ ಬಾಬು. ಕೆ. ಶಾಲಾ ಸ್ಕೌಟ್ಸ್ ಮಾಸ್ಟರ್ ಶ್ರೀ ಪ್ರಕಾಶ್, ಗೈಡ್ಸ್ ಕ್ಯಾಪ್ಟನ್ ಪೂರ್ಣಿಮಾ ಮುಂತಾದವರು ಉಪಸ್ಥಿತರಿದ್ದರು.

## ಮಂಡ್ಯ

ನವೆಂಬರ್ 7 ರಂದು ಮಂಡ್ಯ ಜಿಲ್ಲಾ ಸ್ಕೌಟ್ ಭವನದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಧ್ವಜ ದಿನಾಚರಣೆಯ ಪ್ರಯುಕ್ತ ಧ್ವಜದ ಸ್ಟಿಕ್ಕರ್ ಬಿಡುಗಡೆ ಮಾಡಲಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ. ವರಪ್ರಸಾದ್, ಶ್ರೀಮತಿ ಕೆ.ಸಿ. ನಾಗಮ್ಮ ಶ್ರೀ ಶಿವರಾಮೇಗೌಡ, ಶ್ರೀಮತಿ ಕೆ.ಆರ್. ಗಾಯತ್ರಿ, ಸಿ.ವಿ. ಥಾಮಸ್, ಶ್ರೀ ಜಿ. ಚೆನ್ನಪ್ಪ, ಶ್ರೀ ಎಸ್.ಕೆ.ಎನ್. ಸ್ವಾಮಿ, ಶ್ರೀ ಮೋಹನ್ ರಾಗಿಮುದ್ದನಹಳ್ಳಿ ಕಾರ್ಯಕ್ರಮದಲ್ಲಿ ಹಾಜರಿದ್ದರು.

* ಕೊಡಗು ನಿರಾಶ್ರಿತರಿಗೆ ಮಂಡ್ಯ ಜಿಲ್ಲಾ ಸಂಸ್ಥೆಯಿಂದ ಸಂಗ್ರಹಿಸಿದ ರೂ. 30,000/- ಗಳ ಚೆಕ್ಕನ್ನು ಜಿಲ್ಲಾಧಿಕಾರಿ ಶ್ರೀಮತಿ ಮಂಜುಶ್ರೀ ಅವರಿಗೆ ನವೆಂಬರ್ 7 ರಂದು ನೀಡಲಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ. ವರಪ್ರಸಾದ್, ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು.



## ಮೈಸೂರು

ಅಕ್ಟೋಬರ್ 19 ರಂದು ಮೈಸೂರಿನ ಪ್ರಖ್ಯಾತ ದಸರಾ ಜಂಬೂಸವಾರಿ ಮತ್ತು ಪಂಜಿನ ಕವಾಯಿತಿನಲ್ಲಿ ಜಿಲ್ಲೆಯ 70 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಸ್ಕೌಟ್ಸ್ ವಿಭಾಗದ ನಾಯಕತ್ವವನ್ನು ಕು॥ ಸುಖೇಶ್ ಮತ್ತು ಗೈಡ್ಸ್ ವಿಭಾಗದ ನಾಯಕತ್ವವನ್ನು ಕು॥ ಪ್ರಮೀಳ ರವರು ವಹಿಸಿದ್ದರು.

* ಅಕ್ಟೋಬರ್ 10 ರಿಂದ 19 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ, ಮೈಸೂರು, ಪ್ರಗತಿ ಪ್ರತಿಷ್ಠಾನ, ಮೈಸೂರು ರವರ ಸಹಯೋಗದೊಂದಿಗೆ ನಾಡಹಬ್ಬ ಮೈಸೂರು ದಸರಾ ಹಬ್ಬದ ಸಂದರ್ಭದಲ್ಲಿ ಮೈಸೂರಿಗೆ ಆಗಮಿಸುವ ಪ್ರವಾಸಿಗರು ಹಾಗು ಸಾರ್ವಜನಿಕರಿಗೆ ನಗರದ ಹೃದಯ ಭಾಗವಾದ ಕೆ.ಆರ್. ವೃತ್ತದಲ್ಲಿ ಉಚಿತವಾಗಿ ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡಲಾಗಿತ್ತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಪ್ರಧಾನ ಆಯುಕ್ತರು ನೆರವೇರಿಸಿದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಈ ಕಾರ್ಯಕ್ರಮ ಡಾ. ಬಿ.ಕೆ. ಅಜಯ್ ಕುಮಾರ್ ಜೈನ್, ಸ್ಥಾನಿಕ ಆಯುಕ್ತರು ರವರು ನೇತೃತ್ವದಲ್ಲಿ ನೆರವೇರಿತು.

* ಅಕ್ಟೋಬರ್ 21 ರಂದು ಮೈಸೂರು ಜಿಲ್ಲಾ ಸಂಸ್ಥೆಯಲ್ಲಿ 62ನೇ Jamboree on the Air (Jota) ಮತ್ತು 22ನೇ Jamboree on the internet (joti) ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ 90 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

ಅಕ್ಟೋಬರ್ 21 ರಂದು ಬೆಳಗ್ಗೆ 11.00 ಗಂಟೆಗೆ ಡಾ. ಎಸ್. ಸತ್ಯಪಾಲ್ ನಿರ್ದೇಶಕರು, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಹ್ಯಾಮ್ಸ್ ಕರ್ನಾಟಕ ರವರು Jota-joti ಕಾರ್ಯಕ್ರಮವನ್ನು ಉದ್ಘಾಟಿಸಿದರು. ಪ್ರಕೃತಿ ವಿಕೋಪಗಳು ನಡೆದಾಗ ಹ್ಯಾಮ್‌ನ ಅವಶ್ಯಕತೆ ಹೆಚ್ಚಾಗಿ ಬೇಕಾಗುತ್ತದೆ. ಸ್ಕೌಟ್ಸ್-ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳಾದ ತಾವುಗಳು ಈ ವಿಷಯದಲ್ಲಿ ಪರಿಣಿತಿಯನ್ನು ಪಡೆದುಕೊಂಡು ಪ್ರಕೃತಿ ವಿಕೋಪಗಳು, ಜಾಂಬೂರೇಟ್, ಜಾತ್ರೆಗಳು ಹಾಗೂ ಜಾಥಾಗಳಲ್ಲಿ ಹ್ಯಾಮ್‌ನ ಮುಖಾಂತರ ಸಂಪರ್ಕವನ್ನು ಸಾಧಿಸಬಹುದು ಎಂದು ತಿಳಿಸಿದರು. ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಜಿಲ್ಲಾ ಖಜಾಂಚಿಗಳಾದ ಡಾ. ಕೆ.ಬಿ. ಗುರುಮೂರ್ತಿ ಯವರು ಈ ಕಾರ್ಯಕ್ರಮದ ಮುಖಾಂತರ ತಾವುಗಳು ದೇಶ ವಿದೇಶಗಳ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳನ್ನು ಸಂಪರ್ಕಿಸಬಹುದಾಗಿದೆ. ತಾವುಗಳು ಇದರ ಉಪಯೋಗವನ್ನು ಪಡೆದುಕೊಳ್ಳಬೇಕು ಎಂದು ಹೇಳಿದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಅಬ್ದುಲ್ ಜಮೀಲ್ ರವರು ಸ್ವಾಗತ ಕೋರಿದರು. ಡಾ. ಬಿ.ಕೆ. ಅಜಯ್ ಕುಮಾರ್ ಜೈನ್ ಜಿಲ್ಲಾ ಸ್ಥಾನಿಕ ಆಯುಕ್ತರು ಎಂಣಚಿ-ರಿಂಣು ಕಾರ್ಯಕ್ರಮದ ಬಗ್ಗೆ ಪ್ರಾಸ್ತಾವಿಕ ನುಡಿಯನ್ನು ನುಡಿದರು. ಶ್ರೀ ಎಂ.ಎನ್. ಸುರೇಶ್ ಕುಮಾರ್ ರವರು ವಂದನಾರ್ಪಣೆ ಮಾಡಿದರು.

**MYSURU SCOUTS AND GUIDES HAM CLUB** ಅನ್ನು ಶ್ರೀ ಪಿ.ಜಿ.ಆರ್, ಸಿಂಧ್ಯ ರಾಜ್ಯ ಪ್ರಧಾನ ಆಯುಕ್ತರು ರವರು ಉದ್ಘಾಟಿಸಿದರು. ಕರ್ನಾಟಕ ಭಾರತ್ ಸ್ಕೌಟ್-ಗೈಡ್‌ನ ಇತಿಹಾಸದಲ್ಲಿ ಪ್ರಥಮ ಬಾರಿಗೆ ಒಂದು ಜಿಲ್ಲಾ ಸಂಸ್ಥೆಯವರು ಹ್ಯಾಮ್ ಕ್ಲಬ್ ಅನ್ನು ಪ್ರಾರಂಭಿಸಿರುವುದು ಸಂತೋಷದ ಸಂಗತಿ. ಈ ಹ್ಯಾಮ್ ಕ್ಲಬ್




ಪ್ರಾರಂಭಿಸುವಲ್ಲಿ ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಪ್ರಧಾನ ಆಯುಕ್ತರು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉತ್ತಮ ನಿರ್ಧಾರವನ್ನು ತೆಗೆದುಕೊಂಡಿರುತ್ತಾರೆ. ಎಲ್ಲಾ ರೋವರ್ಸ್-ರೇಂಜರ್ಸ್‌ಗಳು ಹ್ಯಾಮ್ ತರಬೇತಿಯನ್ನು ಪಡೆದುಕೊಂಡು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳ ಆಶಯವನ್ನು ಪೂರ್ಣಗೊಳಿಸಬೇಕು ಎಂದು ತಿಳಿಸಿದರು.





ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಡಾ. ಎಸ್. ಸತ್ಯಪಾಲ್ ನಿರ್ದೇಶಕರು, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಹ್ಯಾಮ್ಸ್, ಕರ್ನಾಟಕ ರವರು ಮಾತನಾಡಿ ಮೈಸೂರಿನಲ್ಲಿ ಹ್ಯಾಮ್ ಕ್ಲಬ್ ಪ್ರಾರಂಭ ಮಾಡಿರುವದು ಸಂತೋಷದ ಸಂಗತಿ. ಈ ಹ್ಯಾಮ್ ಕ್ಲಬ್ ಪ್ರಾರಂಭ ಮಾಡಲು ಹ್ಯಾಮ್ ತರಬೇತಿಯನ್ನು ಪಡೆದುಕೊಂಡು ಪ್ರಮಾಣ ಪತ್ರವನ್ನು ಪಡೆದುಕೊಂಡಿರಬೇಕು. ಮೈಸೂರಿನಲ್ಲಿ ಈ ರೀತಿಯ ತರಬೇತಿಯನ್ನು ಪಡೆದುಕೊಂಡಿರುವ ಶ್ರೀ ಶ್ರವಣ್ ರವರ ನೇತೃತ್ವದಲ್ಲಿ ಈ ಹ್ಯಾಮ್ ಕ್ಲಬ್ ಪ್ರಾರಂಭ ಮಾಡಲಾಗಿದೆ ತಾವುಗಳು ಇದರ ಉಪಯೋಗವನ್ನು ಪಡೆದುಕೊಳ್ಳಬೇಕು. ಎಂದು ತಿಳಿಸಿದರು.

ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ವಿಶ್ವನಾಥ್, ಜಿಲ್ಲಾ ಪ್ರಧಾನ ಆಯುಕ್ತರು ಕರ್ನಾಟಕದಲ್ಲಿಯೇ ಪ್ರಥಮ ಬಾರಿಗೆ ಮೈಸೂರಿನಲ್ಲಿ **Mysuru scouts and guides ham club** ಅನ್ನು ಪ್ರಾರಂಭಿಸಲಾಗಿದೆ. ಮುಂದಿನ ದಿನಗಳಲ್ಲಿ ಹ್ಯಾಮ್‌ನ ತರಬೇತಿಯನ್ನು ಮೈಸೂರಿನಲ್ಲಿ ನಡೆಸಲಾಗುವುದು. ಎಲ್ಲಾ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ತರಬೇತಿಯನ್ನು ಪಡೆದುಕೊಳ್ಳಬೇಕೆಂದರು. ಶ್ರೀ ಅಬ್ದುಲ್ ಜಮೀಲ್ ಜಿಲ್ಲಾ ಕಾರ್ಯದರ್ಶಿಯವರು ಸ್ವಾಗತ ಕೋರಿದರು. ಶ್ರೀಮತಿ ಸುಜಯಾ ಜಂಟಿ ಜಿಲ್ಲಾ ಕಾರ್ಯದರ್ಶಿಯವರು ವಂದನಾರ್ಪಣೆ ಮಾಡಿದರು. ಶ್ರೀ ರಾಮಪ್ರಸಾದ್ ಜಿಲ್ಲಾ ಸಂಘಟಕರು ಕಾರ್ಯಕ್ರಮವನ್ನು ನಿರೂಪಿಸಿದರು.

ಡಾ. ಸಿದ್ದೇಶ್, ಉಪಾಧ್ಯಕ್ಷರು, ಡಾ. ಕೆ.ಬಿ. ಗುರುಮೂರ್ತಿ ಜಿಲ್ಲಾ ಖಜಾಂಚಿಗಳು ಶ್ರೀ ಕೆ.ಜಿ. ಗೋಪಾಲಕೃಷ್ಣ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್) ಶ್ರೀ ಆರ್.ಪಿ. ಚಂದ್ರು, ಜಿಲ್ಲಾ ಸಂಘಟಕರು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

## ರಾಯಚೂರು

ನವೆಂಬರ್ 7 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯಿಂದ ರಾಯಚೂರು ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪನಾ ದಿನಾಚರಣೆಯ ಪ್ರಯುಕ್ತ ಧ್ವಜ ಚೀಟಿ ಬಿಡುಗಡೆ ಮಾಡುವ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ಜಿಲ್ಲಾದಿಕಾರಿಗಳು ಹಾಗೂ ಸಂಸ್ಥೆಯ ಪೋಷಕರು ಆದ ಸನ್ಮಾನ್ಯ ಶ್ರೀ ಶರತ್ ಬಿ. ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿದರು. ನಂತರ ಅವರು ಸಂಸ್ಥೆಯ ಕಾರ್ಯಚಟುವಟಿಕೆಗಳನ್ನು ಶ್ಲಾಘಿಸಿ ಮಕ್ಕಳಿಗೆ ಶುಭ ಹಾರೈಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಉಪಸ್ಥಿತರಿದ್ದರು.

* ನವೆಂಬರ್ 14 ರಂದು ಮಸ್ಕಿ ನೂತನ ತಾಲೂಕ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆಯ ವತಿಯಿಂದ ಮಸ್ಕಿ ಪೋಲಿಸ್ ಠಾಣೆಯ ಆವರಣದಲ್ಲಿ ಧ್ವಜ ಚೀಟಿ ಬಿಡುಗಡೆಯ ಸಮಾರಂಭ ನಡೆಯಿತು. ಈ ಕಾರ್ಯಕ್ರಮದಲ್ಲಿ ತಹಸೀಲ್ದಾರರಾದ ಶ್ರೀ ಮಾನ್ಯ ಬಲರಾಮ. ಸ್ಥಳೀಯ ಸಂಸ್ಥೆಯ ಠಾಣೆಯ ಎ.ಎಸ್.ಐ., ಶ್ರೀ ಧರ್ಮಪ್ಪ ಅವರುಗಳು ಭಾಗವಹಿಸಿದ್ದರು.



## ಶಿವಮೊಗ್ಗ

ಅಕ್ಟೋಬರ್ 3 ರಿಂದ 9 ರ ವರೆಗೆ ಶಿವಮೊಗ್ಗ ಜಿಲ್ಲಾ ಸಂಸ್ಥೆ ಹಾಗೂ ಶಿಕಾರಿಪುರ ಸ್ಥಳೀಯ ಸಂಸ್ಥೆ ವತಿಯಿಂದ ಶಿಕಾರಿಪುರದ ಶ್ರೀ ಕನಕ ವಿದ್ಯಾ ಸಂಸ್ಥೆಯಲ್ಲಿ ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್, ಕಬ್ ಮಾಸ್ಟರ್ಸ್, ಫ್ಲಾಕ್ ಲೀಡರ್ಸ್‌ಗಳ ಮೂಲ ತರಬೇತಿ ಶಿಬಿರ ನಡೆಯಿತು. ಅಕ್ಟೋಬರ್ 8 ರಂದು ಶಿಕಾರಿಪುರದ ಹಾಲಿ ಶಾಸಕರು, ಮಾಜಿ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪ ನವರು ಭೇಟಿ ನೀಡಿ ಶಿಬಿರಾರ್ಥಿಗಳಿಗೆ ಹಿತವಚನ ನೀಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ ವಹಿಸಿದ್ದರು. ಶ್ರೀಮತಿ



ಶಕುಂತಲಾ ಚಂದ್ರಶೇಖರ್, ಜಿಲ್ಲಾ ಆಯುಕ್ತರು (ಗೈಡ್), ಶ್ರೀ ಬಿ.ಸಿ. ವೇಣುಗೋಪಾಲ್, ಅಧ್ಯಕ್ಷರು, ಸ್ಥಳೀಯ ಸಂಸ್ಥೆ ಶಿಕಾರಿಪುರ ಹಾಗೂ ಶಿಬಿರದ ನಾಯಕ/ನಾಯಕಿ ಹಾಗೂ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.

* ಅಕ್ಟೋಬರ್ 20 ರಿಂದ 22 ರ ವರೆಗೆ, ಭಾರತ್ ಸ್ಕೌಟ್ಸ್-ಗೈಡ್ಸ್ ಶಿವಮೊಗ್ಗ ಜಿಲ್ಲಾ ಸಂಸ್ಥೆ ಮತ್ತು ಸ್ಥಳೀಯ ಸಂಸ್ಥೆಗಳ ಆಶ್ರಯದಲ್ಲಿ, ಮಲ್ನಾಡ್ ಓಪನ್ ಗ್ರೂಪ್ ವತಿಯಿಂದ **Jota-joti** ಯನ್ನು ಆಯೋಜಿಸಲಾಗಿತ್ತು. **Ham** ರೇಡಿಯೋ **operator** ಆದಂತಹ ಶ್ರೀ ರಾಜೇಶ್ ಅವಲಕ್ಕಿ ಗ್ರೂಪ್ ಲೀಡರ್, ಮಾಗ್ ಇವರು **Jota** ವನ್ನು ರೋವರ್ ಶ್ರೀ ತಯಾಬ್ ಮುಷ್ತಾಕ್ ಅಹಮದ್ ಆಲಿ



**joti**ಯನ್ನು ನಡೆಸಿಕೊಟ್ಟರು. ಈ ಸಂದರ್ಭದಲ್ಲಿ ಸುಮಾರು 25 ದೇಶಗಳ ಸ್ಕೌಟ್-ಗೈಡ್‌ಗಳ' ಸಂಪರ್ಕ ಸಾಧಿಸಿ ವಿಚಾರ ವಿನಿಮಯ ಮಾಡಲಾಯಿತು. ಶ್ರೀ ಎಸ್. ಉಮೇಶ್ ಶಾಸ್ತ್ರಿ ಜಿಲ್ಲಾ ಆಯುಕ್ತರು (ಸ್ಕೌ) ಶ್ರೀ ಡಿ.ಎನ್. ನೂರ್ ಅಹ್ಮದ್, ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಉಪಸ್ಥಿತರಿದ್ದರು. ಸುಮಾರು 30 ವಿದ್ಯಾರ್ಥಿಗಳು ಭಾಗವಹಿಸಿದ್ದರು.

## ವಿಜಯಪುರ

ಅಕ್ಟೋಬರ್ 2 ರಂದು ವಿಜಯಪುರ ನಗರದ ಗಾಂಧೀ ಚೌಕದಲ್ಲಿರುವ ಮಹಾತ್ಮಾಗಾಂಧೀಜಿಯವರ ಪುತ್ಥಳಿಗೆ ಕರ್ನಾಟಕ ಸರ್ಕಾರದ ಮಾನ್ಯ ತೋಟಗಾರಿಕಾ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಎಂ.ಸಿ. ಮನಗೂಳಿಯವರ ಉಪಸ್ಥಿತಿಯಲ್ಲಿ ಜಿಲ್ಲಾಡಳಿತದಿಂದ ಪೂಜಾಕಾರ್ಯಕ್ರಮ ಜರುಗಿತು. ಈ ಕಾರ್ಯಕ್ರಮದಲ್ಲಿ ನಗರದ ಬೇರೆ ಬೇರೆ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಶಿಕ್ಷಕರೊಂದಿಗೆ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಎಂ.ಎಂ. ಸಿಂಧೂರ ಡಿ.ಡಿ.ಪಿ.ಐ. ಹಾಗೂ ಜಿಲ್ಲಾ ಸ್ಕೌಟ್ ಆಯುಕ್ತರು ಶ್ರೀ ಎಸ್.ಸಿ. ಶೆಡಶ್ಯಾಳ ಅಧ್ಯಕ್ಷರು ಜಿಲ್ಲಾ ನೌಕರರ ಸಂಘ



ಹಾಗೂ ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಶರಣು ಸಬರದ ಜಿಲ್ಲಾ ಸಹ ಕಾರ್ಯದರ್ಶಿಗಳು ಶ್ರೀ ಎನ್.ಆರ್. ಶಿವಪುರ, ಎ.ಎಸ್.ಓ.ಸಿ (ಸ್ಕೌಟ್) ಭಾಗವಹಿಸಿದ್ದರು.

ಈ ದಿನ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ ಬುರಣಾಪೂರ ಇಲ್ಲಿ ಜಿಲ್ಲೆಯ ವಿವಿಧ ಕಾಲೇಜುಗಳಿಂದ 45 ರೋವರ್ಸ್‌ಗಳು ಪೂಜ್ಯ ಮಹಾತ್ಮ ಗಾಂಧೀಜಿಯವರ ಜನ್ಮ ದಿನಾಚರಣೆಯ ಪ್ರಯುಕ್ತ ಸರ್ವಧರ್ಮ ಪ್ರಾರ್ಥನೆ ಹಾಗೂ ಶಿಬಿರ ಕೇಂದ್ರದ ಸ್ವಚ್ಛತಾ ಕಾರ್ಯವನ್ನು ಶ್ರೀ ಪಿ.ಎಲ್. ಹದ್ಲಿ, ಜಿಲ್ಲಾ ಸಂಘಟಕರು (ಸ್ಕೌಟ್) ರವರ ಹಾಗೂ ಶ್ರೀಮತಿ ಗಂಗೂಬಾಯಿ ಬಿಸನಾಳ (ಎಚ್.ಡಬ್ಲ್ಯೂ.ಬಿ.) ಸ್ಕೌಟ್ ಇವರ ನೇತೃತ್ವದಲ್ಲಿ ನಡೆಸಲಾಯಿತು.

* ಅಕ್ಟೋಬರ್ 27 ರಿಂದ 28 ರ ವರೆಗೆ ದಿ॥ ವಾಸಂತಿಬಾಯಿ ಜಿಗಜಿನ್ನಿ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ ಬುರಣಾಪುರ ಇಲ್ಲಿ ವಿಜಯಪುರ ನಗರ ಸ್ಥಳೀಯ ಸಂಸ್ಥೆ ಮಟ್ಟದಲ್ಲಿ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ನಡೆಸಲಾಯಿತು.

ಸ್ಕೌಟ್ಸ್ ವಿಭಾಗದ ಪರೀಕ್ಷಾ ಶಿಬಿರದ ನಾಯಕರಾಗಿ ಶ್ರೀ ನಾಗೇಶ ಶಿವಪೂರ (ಎ.ಎಸ್.ಓ.ಸಿ) ರವರು ಕಾರ್ಯ ನಿರ್ವಹಿಸಿದರು. ಗೈಡ್ಸ್ ವಿಭಾಗದ ಪರೀಕ್ಷ ಶಿಬಿರದ ನಾಯಕಿಯಾಗಿ ಶ್ರೀಮತಿ ಡಿ.ಸಿ. ಪಿಂಜಾರ, ಹೆಚ್.ಡಬ್ಲ್ಯೂ.ಬಿ. ಇವರು ಕಾರ್ಯನಿರ್ವಹಿಸಿದರು. ಒಟ್ಟು 99 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ಉದ್ಘಾಟನೆಯನ್ನು ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಜಿಲ್ಲಾ ಕಾರ್ಯದರ್ಶಿಗಳು ಜ್ಯೋತಿ ಬೆಳಗಿಸುವುದರೊಂದಿಗೆ ನೆರವೇರಿಸಿದರು.

* ನವೆಂಬರ್ 1 ರಂದು ಡಾ. ಬಿ.ಆರ್. ಅಂಬೇಡ್ಕರ್ ಜಿಲ್ಲಾ ಕ್ರೀಡಾಂಗಣದಲ್ಲಿ 62ನೇ ಕನ್ನಡ ರಾಜ್ಯೋತ್ಸವ



ದಿನಾಚರಣೆ ಅಂಗವಾಗಿ ಜಿಲ್ಲಾಡಳಿತವು ಏರ್ಪಡಿಸಿದ್ದ ಪಥಸಂಚಲನ ಕಾರ್ಯಕ್ರಮದಲ್ಲಿ ವಿಜಯಪುರ ಸಂತ ಜೋಸೆಫ್ ಪ್ರೌಢಶಾಲೆಯ ಹಾಗೂ ಎಕ್ಸಲೆಂಟ್ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್ ತಂಡಗಳು ಭಾಗವಹಿಸಿ ಕರ್ನಾಟಕ ಸರ್ಕಾರದ ತೋಟಗಾರಿಕೆ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಎಂ.ಸಿ.ಮನಗೂಳಿ ರವರಿಗೆ ಗೌರವ ವಂದನೆಯನ್ನು ಸಲ್ಲಿಸಿದವು. ಈ ಸಂದರ್ಭದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು ಮತ್ತು ಜಿಲ್ಲೆಯ ಭಾರತ್ ಸ್ಕೌಟ್ಸ್-ಗೈಡ್ಸ್ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ನವೆಂಬರ್ 7 ರಂದು ನಗರದ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಕಛೇರಿಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಸಂಸ್ಥಾಪನಾ ದಿನಾಚರಣೆಯನ್ನು ಆಚರಿಸಲಾಯಿತು.



ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ. ಎಂ. ಸಕ್ರಿಯವರು ಧ್ವಜ ಚೀಟಿ ಬಿಡುಗಡೆ ಮಾಡಿ ಸಂಸ್ಥೆಯ ಅಸ್ತಿತ್ವದ ಅನುಷ್ಠಾನ ಮತ್ತು ಧ್ವಜ ಚೀಟಿ ಬಿಡುಗಡೆ ಮಹತ್ವ ಕುರಿತು ಮಾತನಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಶ್ರದ್ಧಾಂಜಲಿ



**ಶ್ರೀ ಬಾಲಕೃಷ್ಣ ರೆಡ್ಡಿ,** ಎ.ಎಲ್.ಟಿ.(ಸ್ಕೌ) ಇವರು ದಿನಾಂಕ 16-11-2018 ರಂದು ಮಥುರಾದಲ್ಲಿ ಸಂಭವಿಸಿದ ದುರ್ಘಟನೆಯಲ್ಲಿ ಮರಣ ಹೊಂದಿದರು. ಶ್ರೀಯುತರು ದೈಹಿಕ ಶಿಕ್ಷಕರಾಗಿ ನಿವೃತ್ತಿ ಹೊಂದಿದ್ದರು. ಸ್ಕೌಟ್ ಮಾಸ್ಟರ್ ಆಗಿ ಸೇವೆ ಸಲ್ಲಿಸಿದ ಅವಧಿಯಲ್ಲಿ ಅನೇಕ ರಾಷ್ಟ್ರಪತಿ ಸ್ಕೌಟ್ಸ್ ಹಾಗೂ ರಾಜ್ಯ ಪುರಸ್ಕಾರ ಸ್ಕೌಟ್‌ಗಳನ್ನು ತರಬೇತಿ ಗೊಳಿಸಿರುತ್ತಾರೆ. ಜಿಲ್ಲಾ, ರಾಜ್ಯ ಮಟ್ಟದ ಶಿಬಿರಗಳಲ್ಲಿ ನಾಯಕರಾಗಿ ಮತ್ತು ಸಿಬ್ಬಂಧಿಯಾಗಿ ಸೇವೆ ಸಲ್ಲಿಸಿರುತ್ತಾರೆ.

ಇವರ ನಿಧನದಿಂದ ಸ್ಕೌಟ್-ಗೈಡ್ ಸಂಸ್ಥೆಗೆ ತುಂಬಲಾರದ ನಷ್ಟ ಉಂಟಾಗಿದೆ. ಶ್ರೀಯುತರು ಧರ್ಮಪತ್ನಿ, ಮಕ್ಕಳು, ಮೊಮ್ಮಕ್ಕಳು ಹಾಗೂ ಅಪಾರ ಬಂಧು-ಮಿತ್ರರನ್ನು ಅಗಲಿದ್ದಾರೆ. ಇವರ ನಿಧನದಿಂದಾದ ನೋವನ್ನು ಭರಿಸುವ ಶಕ್ತಿಯನ್ನು ಕುಟುಂಬದವರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

**– ರಾಜ್ಯ ಕಾರ್ಯದರ್ಶಿ**



**ಕು|| ಇಂದುರಾಣಿ,** ಗೈಡ್, ಸರ್ಕಾರಿ ಪ್ರೌಢಶಾಲೆ, ಪೋಲಿಸ್ ಕಾಲೋನಿ ರಾಯಚೂರು ಇವರು ಅಲ್ಪಕಾಲದ ಅನಾರೋಗ್ಯದಿಂದ ನವೆಂಬರ್ 10 ರಂದು ನಿಧನರಾಗಿರುತ್ತಾರೆಂದು ತಿಳಿಸಲು ವಿಷಾಧಿಸುತ್ತೇವೆ. ಇವಳು ಸರ್ಕಾರಿ ಮಾದರಿಯ ಹಿರಿಯ ಪ್ರಾಥಮಿಕ ಶಾಲೆ, ಪೋಲಿಸ್ ಕಾಲೋನಿಯಲ್ಲಿ ಗೈಡ್ ಕಂಪನಿಯ ಗೈಡ್ ಲೀಡರಾಗಿ ಉತ್ತಮ ಸೇವೆ ಸಲ್ಲಿಸುತ್ತಿದ್ದಳು. ಹಾಗೂ ಪಥಸಂಚಲನ ಕಾರ್ಯಕ್ರಮಗಳ ನಾಯಕತ್ವ ವಹಿಸಿ ಉತ್ತಮ ಪ್ರದರ್ಶನ ನೀಡುವ ಮೂಲಕ ಶಾಲೆಗೆ ಮತ್ತು ಸಂಸ್ಥೆಗೆ ಕೀರ್ತಿ ತಂದುಕೊಟ್ಟಿದ್ದಾಳೆ. ಇವರು ಅಪಾರ ಬಂಧುಗಳು ಮತ್ತು ಸ್ನೇಹಿತರುಗಳನ್ನು ಅಗಲಿದ್ದಾಳೆ. ಇವಳ ಅಗಲಿಕೆಯ ದುಃಖವನ್ನು ಭರಿಸವ ಶಕ್ತಿಯನ್ನು ಅವರ ಕುಟುಂಬಕ್ಕೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

**– ರಾಜ್ಯ ಕಾರ್ಯದರ್ಶಿ**






ಶ್ರೀ ಹೆಚ್.ಡಿ. ಕುಮಾರಸ್ವಾಮಿ
ಮಾನ್ಯ ಮುಖ್ಯಮಂತ್ರಿಗಳು

# ಅಭಿವೃದ್ಧಿಗೆ ಹೊಸ ಆಯಾಮ



ಡಾ. ಜಿ. ಪರಮೇಶ್ವರ
ಮಾನ್ಯ ಉಪ ಮುಖ್ಯಮಂತ್ರಿಗಳು



**ರೈತರ ನೋವಿಗೆ ಮಿಡಿದ ಮೈತ್ರಿ ಸರ್ಕಾರ**
48,000 ಕೋಟಿ ರೂ. ಕೃಷಿ ಸಾಲ ಮನ್ನಾ
43.59 ಲಕ್ಷ ಕೃಷಿಕರ ಕುಟುಂಬಗಳಲ್ಲಿ ಸಂತಸದ ಹೊನಲು

**ಆಧುನಿಕ ಕೃಷಿಗೆ ಆದ್ಯತೆ**
ಇಸ್ರೇಲ್ ಮಾದರಿಯ ಕೃಷಿ ತಂತ್ರಜ್ಞಾನ ಅಳವಡಿಕೆಗೆ ಪ್ರೋತ್ಸಾಹ. 300 ಕೋಟಿ ರೂ. ಅನುದಾನ
'ರೈತ ಸ್ಪಂದನೆ': ರೈತರೊಂದಿಗೆ ಮುಖ್ಯಮಂತ್ರಿಗಳ ನೇರ ಸಂವಾದ ಕಾರ್ಯಕ್ರಮ

**ನಿರುದ್ಯೋಗ ನಿವಾರಣೆಗೆ ನಿಶ್ಚಿತ ನಡೆ...**
ಚೀನಾ ಮಾದರಿಯಲ್ಲಿ 9 ಜಿಲ್ಲೆಗಳಲ್ಲಿ ಕೈಗಾರಿಕಾ ಕ್ಲಸ್ಟರ್‌ಗಳ ಸ್ಥಾಪನೆ, ಪ್ರತಿ ಜಿಲ್ಲೆಯಲ್ಲಿ 1 ಲಕ್ಷ ಉದ್ಯೋಗ ಸೃಷ್ಟಿ ಆಶಯ, ಖಾಸಗಿ ಸಹಭಾಗಿತ್ವದಲ್ಲಿ ಪ್ರತಿ ಜಿಲ್ಲೆಯಲ್ಲೂ ಉದ್ಯೋಗಮೇಳ

**ಶಿಕ್ಷಣ ಸುಧಾರಣೆಗೆ ಸಂಕಲ್ಪ...**
1,000 ಕೋಟಿ ರೂ. ವೆಚ್ಚದಲ್ಲಿ ಸರ್ಕಾರಿ ಶಾಲಾ ಕಾಲೇಜುಗಳ ಆಧುನೀಕರಣ, ಕರಾವಳಿ, ಮಲೆನಾಡು ಜಿಲ್ಲೆಗಳಲ್ಲಿ ಶಾಲಾಮಕ್ಕಳ ಸಂಚಾರಕ್ಕೆ ಕಾಲುಸಂಕದ ಬದಲು 'ಶಾಲಾ ಸಂಪರ್ಕ ಸೇತು' ಶಾಶ್ವತ ಯೋಜನೆ

**ತಾಯಿ- ಮಗುವಿನ ಲಾಲನೆ ಪಾಲನೆ: 'ಮಾತೃಶ್ರೀ' ಯೋಜನೆ**
ಗರ್ಭಿಣಿ, ಬಾಣಂತಿಯರಿಗೆ ಆರ್ಥಿಕ ನೆರವು.

**ಸಂಧ್ಯಾ ಸುರಕ್ಷಾ ಯೋಜನೆ**
ಹಿರಿಯ ನಾಗರಿಕರಿಗೆ ಮಾಸಿಕ ಪಿಂಚಣಿ ರೂ. 600 ರಿಂದ ರೂ. 1000ಕ್ಕೆ ಹೆಚ್ಚಳ.

**ಪ್ರಗತಿಯ ನಡೆಗೆ ರಸ್ತೆ ನಿರ್ಮಾಣ...**
ನೆನೆಗುದಿಗೆ ಬಿದ್ದಿರುವ ಎಲ್ಲಾ ಹೆದ್ದಾರಿ, ಜಿಲ್ಲಾ ಮತ್ತು ಗ್ರಾಮೀಣ ರಸ್ತೆಗಳ ಯೋಜನೆಗಳಿಗೆ ಚಾಲನೆ

**ಜನತಾ ದರ್ಶನ**
ತಿಂಗಳಿಗೊಮ್ಮೆ ಬೆಂಗಳೂರು ಹಾಗೂ ಜಿಲ್ಲಾ ಕೇಂದ್ರಗಳಲ್ಲಿ ಮುಖ್ಯಮಂತ್ರಿಗಳಿಂದ ಜನತಾ ದರ್ಶನ.
ಸಂಕಷ್ಟದಲ್ಲಿರುವ ಜನರಿಗೆ ತುರ್ತು ಪರಿಹಾರ ದೊರಕಿಸುವ ಮಾನವೀಯ ಕಾರ್ಯಕ್ರಮ

**ಅವಕಾಶ ವಂಚಿತರ ಅಭ್ಯುದಯಕ್ಕೆ ಮಹಾಹೆಜ್ಜೆ...**
ಪರಿಶಿಷ್ಟ ಜಾತಿ, ಪಂಗಡಗಳ ಕಲ್ಯಾಣಕ್ಕಾಗಿ
29,000 ಕೋಟಿ ರೂ.ಗಳ ಬೃಹತ್ ಕಾರ್ಯಕ್ರಮಗಳು

**ಬಡವರ ಬಂಧು**
ಬೀದಿ ಬದಿ ವ್ಯಾಪಾರಿಗಳಿಗೆ ಬಡ್ಡಿರಹಿತ ಸಾಲ ಯೋಜನೆ

**ಋಣ ಪರಿಹಾರ ಕಾಯ್ದೆ - 2018**
ರೈತರು, ಕಾರ್ಮಿಕರು ಹಾಗೂ ಸಣ್ಣ ವ್ಯಾಪಾರಿಗಳನ್ನು ಸಾಲದ ಶೂಲದಿಂದ ಮುಕ್ತಗೊಳಿಸಲು ಪ್ರಾಮಾಣಿಕ ಪ್ರಯತ್ನ

ಗಾಂಧಿ 150

## ಮಹಾತ್ಮರ ಮಾರ್ಗದಲ್ಲಿ ಮೈತ್ರಿ ಸರ್ಕಾರ





ಕರ್ನಾಟಕ ವಾರ್ತೆ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ




ಶ್ರೀ ಹೆಚ್.ಡಿ. ಕುಮಾರಸ್ವಾಮಿ
ಸನ್ಮಾನ್ಯ ಮುಖ್ಯಮಂತ್ರಿಗಳು


ಡಾ. ಜಿ. ಪರಮೇಶ್ವರ
ಸನ್ಮಾನ್ಯ ಉಪ ಮುಖ್ಯಮಂತ್ರಿಗಳು







ನೆರವಿನ ಕರ್ನಾಟಕ

## ಮಾತೃಶ್ರೀ

### ತಾಯಿ ಮಗುವಿನ ಲಾಲನೆ-ಪಾಲನೆ

- ಗರ್ಭಿಣಿ – ಬಾಣಂತಿಯರಿಗೆ ಮಾಸಿಕ 1000 ರೂ.ಗಳ ಆರ್ಥಿಕ ನೆರವು.
- ಆರು ತಿಂಗಳಿಗೆ 6000 ರೂ.ಗಳ ನೆರವಿಗೆ 350 ಕೋಟಿ ರೂ. ಮೀಸಲು



"ಎಲ್ಲಾ ವೈಯಕ್ತಿಕ ಮತ್ತು ಸಾಮೂಹಿಕ ಚಟುವಟಿಕೆಗಳಲ್ಲಿ ಉನ್ನತಿಯನ್ನು ಸಾಧಿಸಲು ಪ್ರಯತ್ನಿಸಿ ದೇಶದ ಪ್ರಗತಿಗಾಗಿ ಶ್ರಮಿಸುವುದು" - ಪ್ರತಿಯೊಬ್ಬ ಭಾರತೀಯನ ಸಂವಿಧಾನಬದ್ಧ ಮೂಲಭೂತ ಕರ್ತವ್ಯ

ಗಾಂಧಿ 150



ಕರ್ನಾಟಕ ವಾರ್ತೆ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

# ನವೆಂಬರ್ 2018ರಲ್ಲಿ ವಿವಿಧ ಜಿಲ್ಲಾ ಸಂಸ್ಥೆಗಳು ಆಚರಿಸಿದ "ಧ್ವಜ ದಿನಾಚರಣೆ" ಕಾರ್ಯಕ್ರಮಗಳ ಚಿತ್ರಗಳು




ಶ್ರೀ ಬಂಡೆಪ್ಪ ಕಾಶಂಪುರ್, ಮಾನ್ಯ ಸಹಕಾರ ಸಚಿವರು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು. ಶ್ರೀ ಭಗವಂತ್ ಖೂಬಾ, ಮಾನ್ಯ ಲೋಕಸಭಾ ಸದಸ್ಯರು, ಶ್ರೀ ರಹೀಮ್ ಖಾನ್, ಮಾನ್ಯ ಶಾಸಕರು, ಜಿಲ್ಲಾ ಪದಾಧಿಕಾರಿಗಳು ಹಾಗೂ ಗೈಡ್ಸ್‌ಗಳು ಚಿತ್ರದಲ್ಲಿದ್ದಾರೆ.




ಡಾ. ರಾಮ್ ಪ್ರಸಾದ್ ಮನೋಹರ್, ಭಾ.ಆ.ಸೇ ಜಿಲ್ಲಾಧಿಕಾರಿಗಳು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು. ಜಿಲ್ಲಾ ಪದಾಧಿಕಾರಿಗಳು ಸ್ಕೌಟ್ಸ್-ಗೈಡ್ಸ್‌ಗಳು ಚಿತ್ರದಲ್ಲಿದ್ದಾರೆ.




ಶ್ರೀ ಜಿ.ಬಿ. ಮನ್ನಿಕೇರಿ, ಜಿಲ್ಲಾ ಮುಖ್ಯ ಆಯುಕ್ತರು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು. ಜಿಲ್ಲಾ ಪದಾಧಿಕಾರಿಗಳು ಹಾಗು ಇತರರು ಚಿತ್ರದಲ್ಲಿದ್ದಾರೆ.




ಶ್ರೀ ಅಶೋಕ್ ದುಡಕುಂಟೆ, ಅಪರ ಜಿಲ್ಲಾಧಿಕಾರಿಗಳು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು. ಜಿಲ್ಲಾ ಪದಾಧಿಕಾರಿಗಳು ಹಾಗು ಸ್ಕೌಟ್ಸ್-ಗೈಡ್ಸ್‌ಗಳು ಚಿತ್ರದಲ್ಲಿದ್ದಾರೆ.




ಶ್ರೀ ಆರ್. ಶಿವಣ್ಣರೆಡ್ಡಿ, ಉಪನಿರ್ದೇಶಕರು, ಸಾ.ಶಿ.ಇಲಾಖೆ ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು. ಶ್ರೀ ಅಂಜನಪ್ಪ, ವಿಷಯ ಪರಿವೀಕ್ಷಕರು (ವೃತ್ತಿ ಶಿಕ್ಷಣ) ಹಾಗೂ ಜಿಲ್ಲಾ ಪದಾಧಿಕಾರಿಗಳು ಮತ್ತು ಸ್ಕೌಟ್ಸ್‌ಗಳು ಚಿತ್ರದಲ್ಲಿದ್ದಾರೆ.




ಶ್ರೀ ಬುಗಾದಿ ಗೌತಮ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು. ಜಿಲ್ಲಾ ಪದಾಧಿಕಾರಿಗಳು ಹಾಗು ಸ್ಕೌಟ್ಸ್-ಗೈಡ್ಸ್‌ಗಳು ಚಿತ್ರದಲ್ಲಿದ್ದಾರೆ.

## ನವೆಂಬರ್ 2018ರಲ್ಲಿ ವಿವಿಧ ಜಿಲ್ಲಾ ಸಂಸ್ಥೆಗಳು ಆಚರಿಸಿದ "ಧ್ವಜ ದಿನಾಚರಣೆ" ಕಾರ್ಯಕ್ರಮಗಳ ಚಿತ್ರಗಳು




ಶ್ರೀ ಎಂ.ಜಿ. ಹಿರೇಮಠ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು
ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.
ಶ್ರೀ ಜಿ.ಎಲ್. ಬಾರಾಟಕ್ಕಿ, ಉಪನಿರ್ದೇಶಕರು, ಸಾ.ಶಿ. ಇಲಾಖೆ
ಹಾಗೂ ಜಿಲ್ಲಾ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.




ಶ್ರೀ ಜಿ. ಜಗದೀಶ್, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು
ಜಿಲ್ಲಾ ಪಂಚಾಯತ್ ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.
ಜಿಲ್ಲಾ ಪದಾಧಿಕಾರಿಗಳು ಹಾಗೂ ರೋವರ್ಸ್‌ಗಳು ಚಿತ್ರದಲ್ಲಿದ್ದಾರೆ.




ಶ್ರೀಮತಿ ಮಂಜುಶ್ರೀ, ಭಾ.ಆ.ಸೇ, ಜಿಲ್ಲಾಧಿಕಾರಿಗಳು
ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.
ಜಿಲ್ಲಾ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.




ಶ್ರೀ ಬಿ. ಶರತ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು ಹಾಗೂ
ಪೋಷಕರು, ಭಾ.ಸ್ಕೌ&ಗೈ ಧ್ವಜ ಚೀಟಿಗಳನ್ನು
ಬಿಡುಗಡೆ ಮಾಡಿದರು. ಜಿಲ್ಲಾ ಪದಾಧಿಕಾರಿಗಳು
ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಚಿತ್ರದಲ್ಲಿದ್ದಾರೆ.




ಶ್ರೀ ಕೆ. ರಾಜು ಮೊಗವೀರ, ಉಪ-ವಿಭಾಗಾಧಿಕಾರಿ
ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.
ಜಿಲ್ಲಾ ಪದಾಧಿಕಾರಿಗಳು ಹಾಗೂ ಇತರರು ಚಿತ್ರದಲ್ಲಿದ್ದಾರೆ.




ಶ್ರೀ ಶ್ರೀಶೈಲ ಬಿರಾದಾರ, ಉಪನಿರ್ದೇಶಕರು, ಸಾ.ಶಿ. ಇಲಾಖೆ
ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.
ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್ ಚಿತ್ರದಲ್ಲಿದ್ದಾರೆ.

Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on every month of 28th or 30th (No. of Page...

# Scouts, Guides & Bunnies in Action



Davanagere



Bengaluru South



Ramnagara



Belagavi



Kolara



Hassan



If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha** #39, Palace Road, Bengaluru - 560 001. **Publisher & Editor : Chinnaswamy Reddy, Printed by : L. Lingappa**
**M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru 26